ಾ ಮತ್ತು ಬಾಪು 150ನೇ ವರ್ಷಾಚರಣೆ – ಪುಸ್ತಕ ಮಾಲಿಕೆ

# ಹಾಸ್ಯ ಮತ್ತು ಗಾಂಧಿ

## (ಗಾಂಧೀಜಿಯವರ ಹಾಸ್ಯ ಪ್ರವೃತ್ತಿ)



ಪ್ರೊ. ಎಂ. ಧ್ರುವರಾಯಣ

ಬಾ-ಬಾಪು 150ನೇ




ವರ್ಷಾಚರಣೆ ಪುಸ್ತಕ ಮಾಲಿಕೆ

# ಹಾಸ್ಯ ಮತ್ತು ಗಾಂಧಿ

ಪ್ರೊ. ಎಂ. ಧ್ರುವನಾರಾಯಣ

ಪ್ರಕಾಶಕರು

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ

ಬೆಂಗಳೂರು – 560001, ದೂರವಾಣಿ : 080–22261967

ಹಾಸ್ಯ ಮತ್ತು ಗಾಂಧಿ
ಲೇಖಕರು : ಪ್ರೊ. ಎಂ. ಧ್ರುವನಾರಾಯಣ
ಪ್ರಕಾಶಕರು : ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001
ದೂರವಾಣಿ : 080–22261967

| | | |
|---|---|---|
| ಮೊದಲ ಮುದ್ರಣ | : | 2008 |
| ಪರಿಷ್ಕೃತ 2ನೇ ಆವೃತ್ತಿ | : | 2018 |
| ಪ್ರತಿಗಳು | : | 1000 |
| ಪುಟಗಳು | : | XIV + 42 |
| ಬೆಲೆ | : | 44/– |
| ಮುದ್ರಕರು | : | ಕ್ರಿಯೇಟಿವ್‌ಗೀಕ್ಸ್<br>ಯಾಧವ ಕಾಲೇಜು ರಸ್ತೆ, ಮಾಧವನಗರ<br>ಬೆಂಗಳೂರು – 560001<br>ದೂರವಾಣಿ : 080 40927049 |



# ಅರ್ಪಣೆ

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ
ಕಾರ್ಯದರ್ಶಿಗಳಾಗಿದ್ದ

**ಪ್ರೊ. ಎನ್. ಕೃಷ್ಣಸ್ವಾಮಿ** ಅವರಿಗೆ

ಗೌರವಪೂರ್ವಕವಾಗಿ

# ನಿಮ್ಮೊಂದಿಗೆ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಲು ಹಾಕಿಕೊಂಡಿರುವ ಹಲವಾರು ಕಾರ್ಯ ಯೋಜನೆಗಳಲ್ಲಿ, ಗಾಂಧೀಜಿ ಅವರ ಚಿಂತನೆಗಳು ಮತ್ತು ತತ್ವ ಸಿದ್ಧಾಂತಗಳುಳ್ಳ ಸಾಹಿತ್ಯವನ್ನು ಪ್ರಕಟಿಸುವುದು, ಪ್ರದರ್ಶಿಸುವುದು ಮತ್ತು ವಿತರಿಸುವುದೂ ಪ್ರಮುಖವಾದುದಾಗಿದೆ. ಅದರಂತೆ "ಹಾಸ್ಯ ಮತ್ತು ಗಾಂಧಿ" ಕೃತಿಯನ್ನು ಪ್ರಕಟಿಸಲು ನನಗೆ ಅತ್ಯಂತ ಹರ್ಷವಾಗುತ್ತದೆ.

ಇಂಥಹ ಅಪರೂಪದ ಸಂಗ್ರಹಾನುವಾದವನ್ನು ಮಾಡಿಕೊಟ್ಟ ಪ್ರೊ. ಎಂ. ಧ್ರುವನಾರಾಯಣ ಅವರಿಗೆ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಭಾರತದ ಸ್ವಾತಂತ್ರ್ಯ ಹೋರಾಟವನ್ನು ಜನಸಮೂಹದೊಂದಿಗೆ ಕೊಂಡೊಯ್ಯುತ್ತಿದ್ದ ಗಾಂಧೀಜಿ ಅವರಿಗೆ ಹಾಸ್ಯಕ್ಕೆ – ನಗುವಿಗೆ ಸಮಯವಿತ್ತೇ? ಎಂಬ ಪ್ರಶ್ನೆ ಸರ್ವೇಸಾಮಾನ್ಯವಾಗಿ ಮೂಡುತ್ತವೆ. ಈ ಪ್ರಶ್ನೆಗೆ ಬಹಳ ಸರಳ ರೀತಿಯಲ್ಲಿ ವಿವಿಧ ಘಟನಾವಳಿಗಳ ಮುಖಾಂತರ, ಗಾಂಧೀಜಿ ಅವರ ಹಾಸ್ಯ ಪ್ರವೃತ್ತಿಯನ್ನು ಧ್ರುವನಾರಾಯಣ ಅವರು ಇಲ್ಲಿ ಅನಾವರಣಗೊಳಿಸಿದ್ದಾರೆ. ಎರಡನೇ ದುಂಡು ಮೇಜಿನ ಸಭೆ ಇರಲಿ, ಹರಿಜನ ನಿಧಿ ಸಂಗ್ರಹದ ಸಮಯವಿರಲಿ, ಹಿಂದಿ ಪ್ರಚಾರ ಸಭೆ ಆಗಿರಲಿ, ಕಾಂಗ್ರೆಸ್ ಪಕ್ಷದಲ್ಲಿರಲಿ, ಕೋರ್ಟಿನಲ್ಲೇ ಇರಲಿ ಗಾಂಧೀಜಿ ಅವರ ತಿಳಿಹಾಸ್ಯ ಇಡೀ ವಾತಾವರಣವನ್ನು ನಗೆಗಡಲಿನಲ್ಲಿ ಮುಳುಗಿಸುತ್ತಿತ್ತು. ಅವರಲ್ಲಿದ್ದ ಸಹಜ ಹಾಸ್ಯ ಪ್ರವೃತ್ತಿಯನ್ನು ಸಾಂದರ್ಭಿಕ ಸನ್ನಿವೇಶದೊಂದಿಗೆ ಲೇಖಕರು ನಮ್ಮಲ್ಲೂ ನಗೆ ಉಕ್ಕುವಂತೆ ಬಣ್ಣಿಸಿದ್ದಾರೆ. "ಸಂವೇದನೆ ಇಲ್ಲದಿದ್ದರೆ, ನಾನು ಬಹಳ ಹಿಂದೆಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೆ" ಎಂಬ ಅವರ ಮಾತು ಮಾನವನ ಸಹಜ ಬೆಳವಣಿಗೆಗೆ, ಮನೋವಿಕಾಸಕ್ಕೆ ಮತ್ತು ಸಾರ್ವಜನಿಕ ಸ್ವಾಸ್ಥ್ಯಕ್ಕೆ ಹಾಸ್ಯ ಪ್ರವೃತ್ತಿಯ ಅವಶ್ಯಕತೆಯನ್ನು ಮನದಟ್ಟು ಮಾಡಿಸುತ್ತದೆ. ಇಂಥಹ ಅಪೂರ್ವ ಕೃತಿಯನ್ನು ಪುನರ್ ಪ್ರಕಟಿಸಲು ಶ್ರಮವಹಿಸಿದ

ಗೌ॥ ಕಾರ್ಯದರ್ಶಿಗಳಾದ ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ಆತ್ಮೀಯ ನಮನಗಳು. ಗಾಂಧೀ ಭವನದ ಎಲ್ಲಾ ಸದಸ್ಯರು ಇಂಥಹ ಗಾಂಧಿ ತತ್ವ ಪ್ರಣೀತ ಕಾರ್ಯಕ್ಕೆ ಸಕಲ ಸಹಕಾರವನ್ನು ನೀಡುತ್ತಿರುವುದಕ್ಕೆ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಈ ಪರಿಷ್ಕೃತ ಆವೃತ್ತಿಯನ್ನು ಅಂದವಾದ ವಿನ್ಯಾಸದೊಂದಿಗೆ ಮುದ್ರಿಸಿದ ಕ್ರಿಯೇಟಿವ್ ಗೀಕ್ಸ್‌ನ ಶ್ರೀ ಮಹೇಶ್ ಮತ್ತು ತಂಡದವರಿಗೆ ಗಾಂಧೀ ಭವನದ ಪರವಾಗಿ ನಮನಗಳು ಸಲ್ಲುತ್ತವೆ.

ಡಾ. ವೂಡೇ ಪಿ. ಕೃಷ್ಣ
ಅಧ್ಯಕ್ಷರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

ಬೆಂಗಳೂರು
ನವೆಂಬರ್ 27, 2018



# ನಮ್ಮ ನಮ್ಮಲ್ಲಿ

ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯ ಸುಸಂದರ್ಭದಲ್ಲಿ, ಮಹಾತ್ಮಾಜೀ ಅವರ ಈ ಕೃತಿಯನ್ನು ಲೋಕಾರ್ಪಣೆ ಮಾಡಲು ಹರ್ಷವೆನಿಸುತ್ತದೆ. ಗಾಂಧೀಜಿ ಅವರ 'ಹಾಸ್ಯ ಮತ್ತು ಗಾಂಧಿ' ಕೃತಿಯನ್ನು ಸರಳ ಕನ್ನಡದಲ್ಲಿ ಮಂದಸ್ಮಿತದಂತೆ ನಮ್ಮೆಲ್ಲರಿಗೂ ಲಭ್ಯವಾಗುವಂತೆ ಮಾಡಿದ ಪ್ರೊ. ಧ್ರುವನಾರಾಯಣ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಮಹಾತ್ಮಾಜೀ ಅವರಲ್ಲಿ ಬಹು ಸಹಜವೆಂಬಂತೆ ಹಾಸ್ಯ ಸಂವೇದನೆ ಮನೆ ಮಾಡಿಕೊಂಡಿತ್ತು. ಗಾಂಧೀಜಿ ಅವರ ಒಡನಾಡಿಗಳು ಅಂದಿನ ಅನುಯಾಯಿಗಳು ಮತ್ತು ಕಾರ್ಯಕರ್ತರು ಅವರ ನಗುಮೊಗವನ್ನೂ, ಮತ್ತು ತಿಳಿಹಾಸ್ಯವನ್ನೂ ತಿಳಿದವರೇ ಆಗಿದ್ದರು. ಆದರೆ ಇದರಿಂದ ಹೊರತಾದವರು ಮತ್ತು ಮುಂದಿನ ತಲೆಮಾರಿನವರಿಗೆ ಗಾಂಧಿ ಅವರ ಹಾಸ್ಯ ಪ್ರವೃತ್ತಿಯ ಪರಿಚಯವೇ ಇಲ್ಲದಿರುವಾಗ, ಪ್ರೊ. ಧ್ರುವನಾರಾಯಣ ಅವರು ಆ ಕೊರತೆಯನ್ನು ನೀಗಿಸಿದ್ದಾರೆ. ನವರಸಗಳಲ್ಲಿ ಒಂದಾದ "ಹಾಸ್ಯ" ಅವರಲ್ಲಿ ತೀರಾ ಸಹಜ ಗುಣವಾಗಿತ್ತು. ಅವರ ಹಾಸ್ಯ ಎಂದೂ ಅನ್ಯರನ್ನು ಅವಮಾನಗೊಳಿಸುವ, ದ್ವೇಷಿಸುವ, ನೋವುಂಟು ಮಾಡುವಂಥಹದ್ದಾಗಿರಲಿಲ್ಲ. ಅವರ ಹಾಸ್ಯ, ಕಠಿಣ ಸನ್ನಿವೇಶಗಳನ್ನು ತಿಳಿಗೊಳಿಸುವಂಥಹದ್ದೂ ಮತ್ತು ಸಹಜ ನ್ಯಾಯವನ್ನು ಹಾಸ್ಯಮಯವಾಗಿ ನಿರೂಪಿಸುವಂಥಹದ್ದಾಗಿತ್ತೆಂಬುದು, ಈ ಕೃತಿಯಿಂದ ತಿಳಿಯಬಹುದಾಗಿದೆ.

ಈ ಕೃತಿಯನ್ನು ಮರುಮುದ್ರಣಗೊಳಿಸಿ ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇಂಥಹ ಅಪೂರ್ವ ಕೃತಿಗಳನ್ನು ಈ ವರ್ಷಾಚರಣೆಯಲ್ಲಿ

ಪ್ರಕಟಿಸಲು ಸದಾ ಉತ್ಸುಕರಾಗಿರುವ ಗಾಂಧೀ ಭವನದ ಅಧ್ಯಕ್ಷರಾಗಿರುವ ಡಾ. ವೂಡೇ ಪಿ. ಕೃಷ್ಣ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡಕ್ಕೆ ಆತ್ಮೀಯ ನಮನಗಳು.

ಇಂದಿರಾ ಕೃಷ್ಣಪ್ಪ
ಗೌ॥ ಕಾರ್ಯದರ್ಶಿ



# ನನ್ನ ಮಾತು

ಗಾಂಧೀಜಿ ಅವರನ್ನು ಕುರಿತು ಸಹಸ್ರಾರು ಪುಸ್ತಕಗಳನ್ನು ಅನೇಕರು ಬರೆದಿದ್ದಾರೆ. ಆದರೆ ಅವರ ಹಾಸ್ಯ ಪ್ರವೃತ್ತಿಯ ಬಗೆಗೆ ಬರೆದಿರುವುದು ಬಹು ವಿರಳ. ಕನ್ನಡದಲ್ಲಿ ಈ ಬಗೆಯ ಸಾಹಿತ್ಯವನ್ನು ಕಂದಾಡೆ ಕೃಷ್ಣಯ್ಯಂಗಾರ, ಸಿದ್ಧವನಹಳ್ಳಿ ಕೃಷ್ಣಶರ್ಮ, ಗೊರೂರು ರಾಮಸ್ವಾಮಿ ಅಯ್ಯಂಗಾರರು ಬರೆದಿದ್ದಾರೆ. ಆದಾಗ್ಯೂ ಅದೇಕೋ ನನ್ನ ಮಿತ್ರರೂ ಗಾಂಧೀ ಸ್ಮಾರಕ ನಿಧಿಯ ಕಾರ್ಯದರ್ಶಿಗಳೂ ಆದ ಶ್ರೀ ದಾಸೇಗೌಡರು ಈ ಹೊತ್ತಿಗೆಯನ್ನು ಬರೆದು ಕೊಡಬೇಕೆಂದು ಕೇಳಿದಾಗ ನಾನು ಅವರಿಗೆ ಪ್ರತಿಯಾಡದೆ ಒಪ್ಪಿಕೊಂಡೆ. ನಂತರ ನನಗೆ ನನ್ನ ತಪ್ಪಿನ ಅರಿವಾಯಿತು.

ನಾನು ಗಾಂಧೀಜಿ ಅವರ ಬಗೆಗೆ ಬರೆದ ವಿವಿಧ ಲೇಖಕರ ಪುಸ್ತಕಗಳಿಂದ ಈ ಘಟನೆಗಳನ್ನು ಸಂಗ್ರಹಿಸಿರುವೆ. ಹೀಗಾಗಿ ಈ ಕೃತಿ ನನ್ನದು ಎಂದೇ ಹೇಳಲಾರೆ. ನಾನು ಓದಿ ಸಂಗ್ರಹಿಸಿದ ಹಾಸ್ಯ ಘಟನೆಗಳನ್ನು ವಾಚಕರ ಮುಂದೆ ಇರಿಸಿದ್ದೇನೆ. ಅದರಲ್ಲಿರಬಹುದಾದ ಓರೆಕೋರೆಗಳಿಗೆ ನಾನೇ ಹೊಣೆ ಎಂದೇ ಹೇಳಬಯಸುವೆ.

ನನಗೆ ಈ ಒಂದು ಅವಕಾಶ ಒದಗಿಸಿಕೊಟ್ಟ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿಯವರಿಗೆ ನಾನು ಋಣಿಯಾಗಿದ್ದೇನೆ.

ಪ್ರೊ॥ ಎಂ. ಧ್ರುವನಾರಾಯಣ



*If I have no sense of humor I would have long ago committed suicide*

*- Gandhiji (1928)*

ನಗುವಿನಿಂದ ಲಭಿಸುವ ವೈದ್ಯಕೀಯ ಲಾಭಕ್ಕಾಗಿ ನೀವು ನಗಬೇಕಾಗಿಲ್ಲ.
ಆದರೆ ನಗುವುದರಿಂದ ದೇಹದಲ್ಲಿನ ಆಮ್ಲಜನಕ ಹೆಚ್ಚುತ್ತದೆ.
ಇದರಿಂದ ನೀವು ಆರೋಗ್ಯವಂತರಾಗುತ್ತೀರಿ.

– ಮದನ್ ಕತಾರಿಯಾ
ಲಾಫಿಂಗ್‌ಮಲಾ ಟೆಕ್ನಿಕ್

# ಪ್ರಕಾಶಕರ ಮಾತು

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಕೆಲವು ಅಮೂಲ್ಯ ಸಾಹಿತ್ಯ ಕೃತಿಗಳ ಪುನರ್‌ಮುದ್ರಣಾ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಜೊತೆಗೆ ಹೊಸದಾಗಿ "ಗಾಂಧೀಜಿ ಮತ್ತು ಆಧ್ಯಾತ್ಮಿಕ ಜೀವನ" ಮತ್ತು ಮಕ್ಕಳಿಗಾಗಿ ಆಂಗ್ಲ ಕೃತಿ "ರಾಷ್ಟ್ರಪಿತ ಮಹಾತ್ಮ ಗಾಂಧೀ" ಕೃತಿಗಳು ಮುದ್ರಣಗೊಂಡಿವೆ. ಗಾಂಧೀಜಿಯ ಹಾಸ್ಯ ಪ್ರವೃತ್ತಿ ಎಂಬ ಸಂಗ್ರಹ ಕೃತಿಯು ಮಹಾತ್ಮ ಗಾಂಧೀಜಿಯವರ ಜೀವನ ಶೈಲಿಯನ್ನು ಬಿಂಬಿಸುತ್ತದೆ. ಗಾಂಧೀಜಿ ಅವರು "ನನಗೆ ಹಾಸ್ಯ ಪ್ರವೃತ್ತಿ ಇಲ್ಲದೇ ಹೋಗಿದ್ದರೆ ನಾನು ಬಹಳ ಹಿಂದೆಯೇ ಆತ್ಮಹತ್ಯೆಯಂತಹ ಪ್ರಯತ್ನವನ್ನು ಕೈಗೊಂಡುಬಿಡುತ್ತಿದ್ದೆ" ಎಂದು 1928ರಲ್ಲಿಯೇ ಹೇಳಿದ್ದಾರೆ. ಅವರು ತಮ್ಮ ವಿಶೇಷ ಗುಣಗಳಾದ ತಿಳಿಹಾಸ್ಯ ಮನೋಭಾವದಿಂದ ಎಂತಹ ಕಷ್ಟಗಳನ್ನೂ ತೇಲಿಸಿಬಿಡುತ್ತಿದ್ದರು. ಅವರು ಯಾವಾಗಲು ಶಾಂತಪ್ರಿಯತೆಯಿಂದ ಹಾಸ್ಯ ಪ್ರಜ್ಞೆಯಿಂದ ಹಸನ್ಮುಖಿಯಾಗಿರುತ್ತಿದ್ದರು. ಅವರ ನಗು ಹಸುಳೆಯ ನಗುವಂತಿರುತ್ತಿತ್ತು. ಇದು ಗಾಂಧೀಜಿ ಅವರನ್ನು ಹತ್ತಿರದಿಂದ ಬಲ್ಲವರೆಲ್ಲರಿಗೂ ತಿಳಿದಿತ್ತು. ಒಮ್ಮೆ ಶ್ರೀಮತಿ ಸರೋಜಿನಿನಾಯ್ಡು ಅವರು ಗಾಂಧೀಜಿ ಅವರ ಸಂದರ್ಶನಕ್ಕಾಗಿ ಕಾದು ಹಿಂತಿರುಗುವಾಗ "ನಿಮ್ಮ ಹಲ್ಲಿಲ್ಲದ ಬಾಯಿಯಲ್ಲಿ ಮೂಡುವ ನಗುವನ್ನು ಕಾಣಬೇಕೆಂಬ ನನ್ನ ಆಸೆ ಭಗ್ನವಾಯಿತು" ಎಂದು ಚೀಟಿಯಲ್ಲಿ ಬರೆದು ಕಳುಹಿಸಿದ್ದರು. ಗಾಂಧೀಜಿ ಅವರು ತಮ್ಮ ಮರಣದ ದಿನವೂ ಸಹ ಹಾಸ್ಯವನ್ನು ತೋರಿದ್ದರು. ಅಂದು ಪ್ರಾರ್ಥನಾ ಸಭೆಗೆ ಹೋಗಲು ತಡವಾಯಿತು. ಇದನ್ನು ಕಂಡ ಗಾಂಧೀಜಿ ಅವರ ಮೊಮ್ಮಗಳು ಸಭೆಗೆ ತಡವಾಗಿದೆ ಎಂದು ಹೇಳಿದ್ದರು. ಅದಕ್ಕೆ ಗಾಂಧೀಜಿ ಅವರು ನಗುನಗುತ್ತಲೇ ನನ್ನ ಗಡಿಯಾರದಂತೆ ಇರುವ ನೀನು ಅದು ಹೇಗೆ ಸುಮ್ಮನಿದ್ದೆ? ತಡವಾದುದಕ್ಕೆ ದೇವರು ಯಾವ ಶಿಕ್ಷೆಯನ್ನು ನೀಡುವನೋ? ಎಂದು ಹಾಸ್ಯ ಚಟಾಕಿಯನ್ನು ಹಾರಿಸಿದರಂತೆ.

ಒಮ್ಮೆ ದುಂಡು ಮೇಜಿನ ಸಭೆಗೆ ಲಂಡನ್‌ಗೆ ಹೋಗಿದ್ದಾಗ ಚಹಾ ಕೂಟವೊಂದರಲ್ಲಿ ಕಿಂಗ್ ಜಾರ್ಜ್ ಅವರು ಗಾಂಧೀಜಿ ಅವರನ್ನು

ಪ್ರಶ್ನಿಸುತ್ತ "ತಾವು ನನ್ನ ಮಗ ಭಾರತಕ್ಕೆ ಭೇಟಿನೀಡಿದ ಸಂದರ್ಭದಲ್ಲಿ ಅವರ ವಿರುದ್ಧ ಬಹಿಷ್ಕಾರ ಹೊಡಿದ್ದಿರೇಕೆ?" ಎಂದರಂತೆ. ಅದಕ್ಕೆ ಗಾಂಧೀಜಿ ನಗುನಗುತ್ತಾ "ನಾವು ಬಹಿಷ್ಕಾರ ಹಾಕಿದ್ದು ನಿಮ್ಮ ಮಗನಿಗಲ್ಲ, ಪ್ರಿನ್ಸ್ ಆಫ್ ವೇಲ್ಸ್ ಅವರಿಗೆ" ಎಂದರಂತೆ. ಹೀಗೆ ಗಾಂಧೀಜಿ ಅವರು ದೊಡ್ಡವರು ಚಿಕ್ಕವರೆನ್ನದೆ ಎಲ್ಲರ ಜೊತೆಯಲ್ಲೂ ಹಾಸ್ಯ ಪ್ರಜ್ಞೆಯನ್ನು ಮೆರೆಯುತ್ತಿದ್ದರು. ಒಮ್ಮೆ ಮಿತವ್ಯಯಕ್ಕೆ ಹೆಸರಾದ ಗಾಂಧೀ ಮೊಂಡು ಬ್ಲೇಡಿನಲ್ಲಿ ಮುಖ ಕ್ಷೌರ ಮಾಡಿಕೊಳ್ಳುತ್ತಾ ಇರುವಾಗ ಸುಭಾಷ್‌ಚಂದ್ರ ಬೋಸರು "ಬಾಪು ಈ ಬ್ಲೇಡ್ ಮೊಂಡಾಗಿದೆ ಇದನ್ನು ಬದಲಾಯಿಸಿ" ಎಂದರಂತೆ. ತಕ್ಷಣ ಬಾಪೂಜಿ ನಗುತ್ತಾ "ಈ ಬ್ಲೇಡಿನಿಂದ ನಿಮ್ಮಂಥ ಹತ್ತು ಜನರ ಕತ್ತನ್ನು ಕೊಯ್ಯಬಲ್ಲೆ" ಎಂದರಂತೆ. ಹೀಗೆ ಅವರು ಚಾಟಿಯಂತೆ ಹಾಸ್ಯಲೇಪನದಲ್ಲಿ ಹರಿತವಾದ ಉತ್ತರ ನೀಡುತ್ತಿದ್ದರು. ಮಹಾನ್ ವ್ಯಕ್ತಿಯಾಗಬಯಸುವವನಿಗೆ ಹೇಗೆ ಶುದ್ಧ ಅಂತಃಕರಣವಿರಬೇಕೋ ಅಷ್ಟೇ ಹಾಸ್ಯ ಮನೋಭಾವವೂ, ಸೇವಾಮನೋಭಾವವೂ ಇರಬೇಕಾಗುತ್ತದೆ. ಅಂತಹ ಎಲ್ಲಾ ಗುಣಗಳು ಮಹಾತ್ಮಗಾಂಧೀಜಿ ಅವರಲ್ಲಿ ಕಾಣಬಹುದಾಗಿತ್ತು. ಅವರ ಸಾವಿನ ಅಂತಿಮ ಗಳಿಗೆಯಲ್ಲಿಯೂ ಹಾಸ್ಯ ಮನೋಭಾವನೆಯನ್ನು ಕಾಣಬಹುದಾಗಿತ್ತು. ಇಂತಹ ಗಾಂಧೀಜಿ ಅವರ ಬಹುಮುಖ ವ್ಯಕ್ತಿತ್ವದ ಪರಿಚಯದ ಸಂಗ್ರಹ ಕೃತಿಯಾದ ಗಾಂಧೀಜಿಯ ಹಾಸ್ಯ ಮತ್ತು ಗಾಂಧೀ ಎಂಬ ಕೃತಿಯನ್ನು ಸಂಗ್ರಹಿಸಿಕೊಟ್ಟ ಪ್ರೊ॥ ಎಂ. ಧ್ರುವನಾರಾಯಣ್ ಅವರಿಗೂ ಹಾಗೂ ಇಂತಹ ಕೃತಿಯನ್ನು ಪ್ರಕಟಿಸಲು ಸಹಕಾರ ನೀಡಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಕಾರ್ಯಕಾರಿ ಸಮಿತಿ ಸದಸ್ಯರೆಲ್ಲರ ಸಹಕಾರವನ್ನು ನೆನೆಯುತ್ತೇನೆ. ಹಾಗೂ ಅರ್ಥಪೂರ್ಣ ಮುಖಪುಟ ರಚಿಸಿಕೊಟ್ಟ ಶ್ರೀ ಬಸವರಾಜ ಪಾಟೀಲ ಅವರಿಗೂ ಮತ್ತು ಅಂದವಾಗಿ ಸಮಯಕ್ಕೆ ಸರಿಯಾಗಿ ಮುದ್ರಿಸಿಕೊಟ್ಟ ಶ್ರೀ ಮಂಜುನಾಥ ಪ್ರಿಂಟರ್ಸ್ ಮಾಲೀಕರಾದ ಶ್ರೀ ಲೋಕೇಶ್ ಅವರಿಗೂ ಧನ್ಯವಾದಗಳು ಸಲ್ಲುತ್ತವೆ.

ಡಾ॥ ಹೊ. ಶ್ರೀನಿವಾಸಯ್ಯ
ಅಧ್ಯಕ್ಷರು ಮತ್ತು ಪ್ರಕಾಶಕರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

# ಪರಿವಿಡಿ

# ಹಾಸ್ಯ ಮತ್ತು ಗಾಂಧಿ

## (ಗಾಂಧೀಜಿ ಅವರ ಹಾಸ್ಯಪ್ರವೃತ್ತಿ)

**"If I have no sense of humour. I would have long ago committed suicide"**

**- Gandhi 1928**

ಜನತೆಯ ಮನದಾಳದಲ್ಲಿ ನೆಲೆಸಿರಬಹುದಾದ ಗಾಂಧೀಜಿ ಅವರ ಶ್ರೇಷ್ಠ ಲಕ್ಷಣ ಎಂದರೆ ಅವರ ಹಾಸ್ಯ ಪ್ರವೃತ್ತಿ. ಗಾಂಧಿ ಎಂದ ಕೂಡಲೇ ನಮ್ಮ ಕಣ್ಣಿನ ಮುಂದೆ ನಿಲ್ಲುವ ಚಿತ್ರ ಎಂದರೆ ಬೋಳು ತಲೆ, ಬೊಚ್ಚು ಬಾಯಿಯ ನಗೆ ಹಾಗೂ ಅವರು ಧರಿಸುತ್ತಿದ್ದ ದುಂಡು ಚೌಕಟ್ಟಿನ ಚಾಳೀಸು.

ಗಾಂಧೀಜಿ ಅವರ ವಿಶೇಷ ಗುಣ ಎಂದರೆ ಎಷ್ಟೇ ಕಷ್ಟದಲ್ಲಿದ್ದರೂ ಅದನ್ನು ತಿಳಿಹಾಸ್ಯದಿಂದ ತೇಲಿಸಿ ಮುಂದುವರಿಯುತ್ತಿದ್ದರು. ಹೀಗೆಂದ ಮಾತ್ರಕ್ಕೆ ಅವರು ನಾವು ಸರ್ಕಸ್ಸಿನಲ್ಲಿ ನೋಡುವ ಜೋಕರ್ ಹಾಗೆ ಎಂದು ಭಾವಿಸಿದರೆ ತಪ್ಪಾದೀತು. ಹಾಸ್ಯ ಅವರಿಗೆ ಸಂಜೀವಿನಿಯಂತೆ ಇತ್ತು. ಈ ದಿಶೆಯಲ್ಲಿ ನಾವು ಮನವರಿಕೆ ಮಾಡಿಕೊಳ್ಳಲೇಬೇಕಾದ ವಿಷಯ ಎಂದರೆ ಅವರು ಶಾಂತಿಪ್ರಿಯರಾಗಿದ್ದುದರಿಂದಲೇ ಅವರಿಗೆ ಹಾಸ್ಯಪ್ರಜ್ಞೆ ಇತ್ತು. ಅವರು ಯಾವಾಗಲೂ ನಗುಮುಖಿಯಾಗಿಯೇ ಇದ್ದರು. ಅವರು ಏಕೆ ನಗುತ್ತಿದ್ದರು? ಅವರೇಕೆ ಹಾಸ್ಯ ಮನೋಭಾವನೆ ಹೊಂದಿದ್ದರು ಈ ಎಲ್ಲಾ ಪ್ರಶ್ನೆಗಳು ಗೌಣ.

ಹಾಸ್ಯದಲ್ಲಿ ಅನೇಕ ವಿಧಗಳಿವೆ. ತಿಳಿ ಹಾಸ್ಯ, ಮರ ಹಾಸ್ಯ, ಛೇಡಿಸುವ ಹಾಸ್ಯ, ಅಪಹಾಸ್ಯ, ಮನಸ್ಸಿಗೆ ನೋವು ಉಂಟು ಮಾಡಬಹುದಾದ ಹಾಸ್ಯ ಮುಂತಾದವು. ಈ ನಿಟ್ಟಿನಲ್ಲಿ ಉದಾಹರಿಸಬಹುದಾದ ಪ್ರಮುಖ ವ್ಯಕ್ತಿಗಳೆಂದರೆ, ಇಂಗ್ಲೆಂಡಿನ ಚಾರ್ಲಿ ಚಾಪ್ಲಿನ್ ಹೆಸರಾಂತ ನಾಟಕಕಾರನಾದ ಬರ್ನಾಡ್ ಷಾ, ನಮ್ಮ ಮಧ್ಯೆ ಬಾಳಿ ಬದುಕಿದ ಬೀರಬಲ್, ತೆನಾಲಿ ರಾಮಕೃಷ್ಣ, ಕೈಲಾಸಂ, ಬಳ್ಳಾರಿ ಬೀಚಿ ಮುಂತಾದವರು.

ಹಾಸ್ಯ ಮಾನವನ ಸುಖ ಜೀವನಕ್ಕೆ ಇರಬಹುದಾದ ಏಕೈಕ ಮದ್ದು. ಹಾಸ್ಯ ಜ್ಞಾನಿಯ ಹೆಗ್ಗುರುತು. ಚಾತುರ್ಯ ಹಾಗೂ ವಿವೇಕದ ಲಕ್ಷಣ. ದುಃಖ ನಿವಾರಿಸುವ ಶಕ್ತಿ ಹಾಸ್ಯದಲ್ಲಿದೆ. ಅದು ಮಾನವರ ಆಶೋತ್ತರ ಹಾಗೂ ಅವರು ಹೊಂದಿರುವ ಇತಿಮಿತಿಗಳ ಸಂಕೇತ. ಹಾಸ್ಯ ಸತ್ಯದ ಇನ್ನೊಂದು ಮುಖವಾಡ.

ಗಾಂಧೀಜಿ ಅವರು ಏಕೆ ಹಾಸ್ಯ ಮಾಡುತ್ತಿದ್ದರು? ಏನನ್ನು ಕುರಿತು ಹಾಸ್ಯ ಮಾಡುತ್ತಿದ್ದರು? ಅವರ ಹಾಸ್ಯ ಮಾನವರ ಮನಸ್ಸಿಗೆ ನೋವು ಮಾಡುತ್ತಿತ್ತೇ? ಹಾಸ್ಯದಿಂದ ಅವರು ಏನನ್ನು ಸಾಧಿಸಿದರು? ಈ ಎಲ್ಲ ಪ್ರಶ್ನೆಗಳಿಗೂ ಅವರ ಬೊಚ್ಚುಬಾಯಿಯ ನಗು ಒಂದೇ ಉತ್ತರ ಎಂದರೆ ತಪ್ಪಾಗದು. ಈ ಒಂದು ಹಿನ್ನೆಲೆಯಲ್ಲಿ ಅವರು ಹಾರಿಸಬಹುದಾದ ಹಲವು ಚಟಾಕಿಗಳನ್ನು ಸಂಗ್ರಹಿಸಿ ನೀಡುವ ಒಂದು ಕಿರಿ ಪ್ರಯತ್ನ ಇಲ್ಲಿ ಮಾಡಲಾಗಿದೆ.

ದಿ॥ ಕಂದಾಡೆ ಕೃಷ್ಣಯ್ಯಂಗಾರರು ಹೇಳುವಂತೆ "ಗಾಂಧಿ ಅವರು ನಗುವುದೂ, ನಿದ್ದೆ ಮಾಡುವುದೂ, ಹಾಲು ಹಸುಳೆಯಂತೆ. ಗಾಂಧಿಯನ್ನು ಕಂಡವರೆಲ್ಲರಿಗೂ ಗೊತ್ತು. ಸದಾ ನಗುತ್ತಾ, ನಗಿಸುತ್ತಲಿರುವುದೇ ಅವರ ಸ್ವಭಾವ, ನಿಷ್ಠುರ ಕಠಿಣ, ಕಠೋರ ಕ್ರೂರ ಲಕ್ಷಣವೊಂದಾದರೂ ಅವರ ಮುಖದಲ್ಲಿಲ್ಲ. ನಿಷ್ಠುರ ಅಥವಾ ಗಂಭೀರವಾದ ಸಮಯದಲ್ಲಿಯೂ ಪ್ರಸನ್ನತೆಯಾಗಲೀ ಚಾರು ಹಾಸವಾಗಲೀ ಅಂತರ್ಧಾನವಾಗುವುದೇ ಇಲ್ಲ. ರೋಗಪೀಡಿತರಾಗಿ ಹಾಸಿಗೆ ಹಿಡಿದಾಗಲೂ ನಗುತ್ತ ಸಮೀಪವರ್ತಿಗಳನ್ನು ನಗಿಸುತ್ತಾ ಇರುತ್ತಾರೆ... ಗಾಂಧಿಯವರು ನಕ್ಕಾಗ ತೋರಿಕೊಳ್ಳುವ ಕಾಂತಿಯು ಹಸುಮಕ್ಕಳ ನಗುವಿನಲ್ಲಿ ತೋರುವ ಕಾಂತಿಯಂತೆ ಸ್ವಚ್ಛವಾದುದು. ಆದುದರಿಂದಲೇ ಶ್ರೀಮತಿ ಸರೋಜಿನಿನಾಯ್ಡು ಒಂದು ಸಲ ದರ್ಶನಕ್ಕಾಗಿ ಎರಡು ಗಂಟೆ ಕಾಲ ಕಾಯ್ದು ಹಿಂತಿರುಗಿ ಹೋಗುವಾಗ ಹಲ್ಲಿಲ್ಲದ ನಿಮ್ಮ ಬಾಯಿಯಲ್ಲಿ ಆಡುವ ನಗುವನ್ನು ಕಾಣಬೇಕೆಂಬ ನನ್ನ ಆಶೆ ಭಗ್ನವಾಯಿತು ಎಂದು ಚೀಟಿ ಬರೆದು ಕಳುಹಿಸಿದ್ದರು."

ನಗು ಹೇಗೆ ಮತ್ತು ಏಕೆ ಹುಟ್ಟುತ್ತದೆ ಎಂಬುದನ್ನು ವಿಶ್ಲೇಷಣೆಗೆ ಗುರಿಪಡಿಸಿದಾಗ ವಿದ್ವಾಂಸರು ಹೇಳುವಂತೆ ಸಂಬಂಧವೇ ಇಲ್ಲದಿರುವ ಅಂಶಗಳಿಗೆ ಆಕಸ್ಮಿಕ ಸಂಬಂಧಗಳನ್ನು ಕಲ್ಪಿಸುವುದರಿಂದ ಹಾಗೂ

ಮತ್ತೊಬ್ಬರಲ್ಲಿ ನಮಗಿಂತ ಕೀಳಾದ ಬುದ್ಧಿ ಲಕ್ಷಣವನ್ನು ಕಂಡಾಗ ನಗು ಹುಟ್ಟುತ್ತದಂತೆ.

ಇದಕ್ಕೆ ಕಂದಾಡೆಯವರೇ ಒಂದು ಉದಾಹರಣೆಯನ್ನು ನೀಡಿದ್ದಾರೆ. ಅದೇನೆಂದರೆ ಓರ್ವ ಶೋತ್ರೀಯ ಬ್ರಾಹ್ಮಣ ವಂಶದವನು ಪೋಲೀಸ್ ಇಲಾಖೆಯ ಹಿರಿಯ ಹುದ್ದೆಗೆ ಆಯ್ಕೆಯಾದನಂತೆ. ಆಗ ಅವನು ಪೋಲೀಸ್ ಸಮವಸ್ತ್ರವನ್ನು ಧರಿಸಿ ಕನ್ನಡಿಯಲ್ಲಿ ತನ್ನ ಪ್ರತಿರೂಪ ಕಂಡು ತನಗೆ ತಾನೇ ನಗುತ್ತಾ ಹೀಗೆ ಹೇಳಿಕೊಂಡನಂತೆ. "ಅಯ್ಯೋ ಋಣಪಾತಕ ಅನುಭವಿಸು! ಘನಪಾಠಿಗಳ ಹೊಟ್ಟೆಯಲ್ಲಿ ಹುಟ್ಟಿದವನಿಗೆ ಈ ಚಕ್ಕಳದ ಹಿತ್ತಾಳೆಯ ಆಭರಣಗಳೇ! ಅನುಭವಿಸು, ಅನುಭವಿಸು" ಎಂದೇ ಹೇಳಿಕೊಂಡನಂತೆ.

ಆದರೆ ಗಾಂಧೀಜಿ ಅವರ ಹಾಸ್ಯ ಬೇರೆಯವರಿಗೆ ನೋವು ನೀಡದ ಹಾಸ್ಯ. ಅವರಲ್ಲಿನ ಹಾಸ್ಯ ಪ್ರವೃತ್ತಿ ತುಂಬಾ ಸೂಕ್ಷ್ಮ ಹಾಗೂ ಉದಾರವಾದದ್ದು. ಅವರ ಹಾಸ್ಯ ಕಳೆ ದಿವ್ಯವಾದುದು.

ಗಾಂಧೀಜಿ ಅವರು ತಮ್ಮ ಮರಣದ ದಿನ ಪ್ರಾರ್ಥನಾ ಸಭೆಗೆ ತಡವಾಗಿ ಹೋದರು. ಸಭೆಗೆ ತಡವಾಗಿದೆ ಎಂದೇ ಅವರ ಮೊಮ್ಮಗಳು ಹೇಳಿದಾಗ, ಗಾಂಧೀಜಿ ಅವರು ನಗುನಗುತ್ತಲೇ ಹೇಳಿದ್ದೇನು! "ನನ್ನ ಗಡಿಯಾರದಂತೆ ಇರುವ ನೀನು ಅದು ಹೇಗೆ ಸುಮ್ಮನಿದ್ದೆ? ತಡವಾದುದಕ್ಕೆ ದೇವರು ನನಗೆ ಯಾವ ಶಿಕ್ಷೆ ನೀಡುವನೋ?" ಎಂದೇ ಹಾಸ್ಯದ ಚಟಾಕಿ ಹಾರಿಸಿದರಂತೆ. "ಶರಣರ ಸಾವನ್ನು ಅವರ ಮರಣದಲ್ಲಿ ನೋಡು". ನಿಜವಲ್ಲವೇ?

* * *

ಚಂಪಾರಣ್ಯದ ಸತ್ಯಾಗ್ರಹ ತುಂಬಾ ಹೆಸರುವಾಸಿಯಾಗಿದೆ. ಈ ಚಂಪಾರಣ್ಯ ಸತ್ಯಾಗ್ರಹ ಸಮಯದಲ್ಲಿ ಆಚಾರ್ಯ ಕೃಪಲಾನಿಯವರು ಗಾಂಧಿಯೊಂದಿಗಿದ್ದರು. ಆಗ ಅವರಿಗೆ ಮದುವೆ ಆಗಿರಲಿಲ್ಲ. ಆ ಜಿಲ್ಲೆಯ ಕಲೆಕ್ಟರರಿಗೆ ಗಾಂಧೀಜಿಗಿಂತ ಅವರ ಹಿಂಬಾಲಕರ ಬಗೆಗೆ ಭಯವಿತ್ತು. ಏಕೆಂದರೆ ಕೃಪಲಾನಿ ಯುವಕ ಭಾವಾವೇಶ ಬುದ್ಧಿಜೀವಿ. ಹೀಗಾಗಿ ಕಲೆಕ್ಟರು ಗಾಂಧೀಜಿಗೆ ಮೊರೆ ಇಟ್ಟು "ನೀವೇನೋ ಸರಿ ಅಹಿಂಸಾವಾದಿಗಳು, ಆದರೆ ನಿಮ್ಮ ಹಿಂದೆ ಇರುವ ಹಿಂಬಾಲಕರು ಹಾಗಲ್ಲ. ನೀವೇ ನೋಡಿ ಈ ಕೃಪಲಾನಿ ಶುದ್ಧ ಕಿಲಾಡಿ ನಂಬರ್ ಒನ್, ಘಟಿಂಗ ಚಳುವಳಿಗಾರ" ಎಂದು ಹೇಳಿದರಂತೆ. ಆಗ ಗಾಂಧೀಜಿ ಅವರು ನಗುತ್ತಲೇ ಹೀಗೆ ಹೇಳಿದರಂತೆ

"ಅವನೊಬ್ಬ ಬಡ ಉಪಾಧ್ಯಾಯ ಅವನು ಹೇಗೆ ಚಳುವಳಿಗಾರನಾಗಬಲ್ಲ? ಅವನು ಅಡುಗೆಯ ಕಾರ್ಯದಲ್ಲಿ ಬಾಗಿ ಸಹಕಾರಿಯೇ ಹೊರತು ಚಳುವಳಿಗಾರನಲ್ಲ" ಎಂದೇ ನಗುತ್ತಾ ಹೇಳಿದರಂತೆ.

* * *

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ 'ಪೂನಾ ಒಪ್ಪಂದ' ತುಂಬಾ ಹೆಸರುವಾಸಿ. ಏಕೆಂದರೆ ನಮ್ಮ ಆಳರಸನಾಗಿದ್ದ ಬ್ರಿಟಿಷರು ಜಾತೀಯ ಆಧಾರದ ಮೇಲೆ ಮತಗಟ್ಟೆಯ ನಿರ್ಣಯ ಮಾಡಬೇಕೆಂಬ ಹುನ್ನಾರದಲ್ಲಿದ್ದರು. ಡಾ॥ ಅಂಬೇಡ್ಕರರು ಹರಿಜನರಿಗೆ ಪ್ರತ್ಯೇಕ ಮತಗಟ್ಟೆಗಳನ್ನು ನೀಡಬೇಕೆಂದು ಪ್ರತಿಪಾದಿಸಿದರು. ಇದನ್ನು ವಿರೋಧಿಸಿದ ಗಾಂಧೀಜಿ ಅವರು ಯರವಡಾ ಜೈಲಿನಲ್ಲಿ 21 ದಿನಗಳ ಉಪವಾಸ ಕ್ರಮ ಕೈಗೊಂಡರು. ಅವರ ಈ ಉಪವಾಸ ನಾಯಕರನ್ನು ಚಿಂತೆಗೆ ಗುರಿಮಾಡಿತು. ಹೇಗಾದರೂ ಮಾಡಿ ಅವರ ಮನ ಒಲಿಸಿ ಉಪವಾಸವನ್ನು ಕೊನೆಗೊಳಿಸಬೇಕೆಂದು ಸುಧಾಕರ ಚತುರ್ವೇದಿ ಅವರನ್ನು ಗಾಂಧಿಯ ಬಳಿಗೆ ಕಳುಹಿಸಲಾಯಿತು. ಇವರು ವೇದಪಾರಂಗತರು. ಗಾಂಧಿಯ ಒಡನಾಡಿಗಳು. ಇವರು ಗಾಂಧಿಗೆ ಸಮಜಾಯಿಸಿ ಹೇಳಿ ಗಾಂಧಿ ಹಾಗೂ ಅಂಬೇಡ್ಕರರ ಮಧ್ಯೆ ಒಪ್ಪಂದ ಕುದುರಿಸಿದರು. ಆಗ ಗಾಂಧಿ ಲಿಂಬೆ ರಸ ಕುಡಿದು ಉಪವಾಸ ಮುರಿಯುತ್ತಾ ಹೀಗೆ ಹೇಳಿದರಂತೆ "Sudhakar you are a Veda Specialist. I am a fast specialist". ಮುಂದುವರಿದು ಈ ಸುಧಾಕರನನ್ನು ಜೈಲಿನಲ್ಲಿಡಿ. ಇವನು ಹೊರಗೆ ಇದ್ದರೆ ತುಂಬಾ ತರಲೆ ಮಾಡುತ್ತಾನೆ ಎಂದೇ ನಗುನಗುತ್ತಾ ಹೇಳಿದರಂತೆ!

* * *

ಗಾಂಧೀಜಿ ಎರಡನೆಯ ದುಂಡು ಮೇಜಿನ ಪರಿಷತ್‌ಗೆ (Round Table conference) ಲಂಡನ್‌ಗೆ ಹೋದ ಸಮಯ. ಕಿಂಗ್ ಜಾರ್ಜ್ ಅವರು ಚಹಾ ಪಾನಕ್ಕೆ ಕರೆದಿದ್ದರು. ಆಗ ರಾಣಿ ಮೇರಿಯವರು "ಏನು ಗಾಂಧೀಜಿ, ನೀವೇಕೆ ಮೈ ತುಂಬಾ ಬಟ್ಟೆ ಹಾಕುವುದಿಲ್ಲ?" ಎಂದು ಕೇಳಿದರಂತೆ. ಆಗ ಗಾಂಧೀಜಿ ಅವರು "ನಿಮ್ಮ ಪತಿದೇವರಾದ ಅರಸು ಜಾರ್ಜ್ ಮೈ ಮೇಲೆ ನಾಲ್ಕು ಜನರಿಗೆ ಆಗುವಷ್ಟು ಬಟ್ಟೆ ಇದೆ. ಹೀಗಾಗಿ ನನ್ನಗೆಲ್ಲಿ ಬಟ್ಟೆ?" ಎಂದೇ ಹಾಸ್ಯ ಮಾಡಿದರಂತೆ.

* * *

ಚಹಾ ಕೂಟದಲ್ಲಿ ಕಿಂಗ್ ಜಾರ್ಜ್ ಅವರು "ಗಾಂಧೀಜಿ, ನನ್ನ ಮಗ ಭಾರತಕ್ಕೆ ಭೇಟಿ ನೀಡಿದಾಗ ನೀವು ಅವನ ವಿರುದ್ಧ ಬಹಿಷ್ಕಾರ ಏಕೆ ಹೂಡಿದಿರಿ?" ಎಂದು ಕೇಳಿದರಂತೆ. ಆಗ ಗಾಂಧೀಜಿ ಅವರು ನಗು ನಗುತ್ತಾ ಅವರಿಗೆ ಹೀಗೆ ಹೇಳಿದರಂತೆ "ನಾವು ಬಹಿಷ್ಕಾರ ಹಾಕಿದ್ದು ನಿನ್ನ ಮಗನಿಗಲ್ಲ ಪ್ರಿನ್ಸ್ ಆಫ್ ವೇಲ್ಸರಿಗೆ."

ಇದೇ ದುಂಡು ಮೇಜಿನ ಪರಿಷತ್ತಿನ ಸಮಯ. ಗಾಂಧಿ ಈಟನ್ ಕಾಲೇಜಿಗೆ ಭೇಟಿ ನೀಡಿದ್ದರು. ಅವರು ಕಾಲೇಜಿಗೆ ಹೋದಾಗ ಅಲ್ಲಿನ ಪ್ರಿನ್ಸಿಪಾಲರು ಅವರನ್ನು ಸ್ವಾಗತಿಸುತ್ತಾ "ಇಂಡಿಯಾಕ್ಕೆ ಸ್ವಾತಂತ್ರ್ಯ ದೊರೆತರೆ ನೀವೇನು ಮಾಡುವಿರಿ?" ಎಂದು ಕೇಳಿದರಂತೆ. ಆಗ ಗಾಂಧಿ ನಗುತ್ತಲೇ ಹೀಗೆ ಹೇಳಿದರಂತೆ "ಈ ನಗರದ ಅಂದರೆ ಈಟನ್ ವಿಶ್ವವಿದ್ಯಾಲಯದಲ್ಲಿ ಓದಿದವರ್‍ಯಾರಿಗೂ ಕೆಲಸ ಕೊಡುವುದಿಲ್ಲ" ಎಂದರಂತೆ (ಚರ್ಚಿಲ್ ಈಟನ್ ವಿದ್ಯಾರ್ಥಿ).

* * *

ಇದೇ ಸಮಯ. ದುಂಡು ಮೇಜಿನ ಪರಿಷತ್ತನ್ನು ಅರಮನೆಯಲ್ಲಿ ಏರ್ಪಡಿಸಲಾಗಿತ್ತು. ಅರಸನನ್ನು ಭೇಟಿ ಮಾಡಲು ಮೈ ತುಂಬಾ ಬಟ್ಟೆ ಧರಿಸುವ ಸಂಪ್ರದಾಯ. ಹಾಗೂ ಅದು ಕಡ್ಡಾಯ. ಗಾಂಧೀಜಿ ಅವರು ಕೇವಲ ಒಂದು ಉಣ್ಣೆಯ ಕದ್ದರ್ ಶಾಲನ್ನು ಹೊದೆದುಕೊಂಡು ಹೋದಾಗ ಬಾಗಿಲ ಬಳಿ ಬಂದಿದ್ದ ಗಾಂಧೀಜಿ ಅವರನ್ನು ಓರ್ವ ಪತ್ರಕರ್ತ ಹೀಗೆ ಕೇಳಿದನಂತೆ "ಏನು ನೀವು ಬಟ್ಟೆ ಬದಲಾಯಿಸುವುದಿಲ್ಲವೇ?" ಆಗ ಗಾಂಧೀಜಿ ಅವರು ತಮ್ಮ ಮೈಮೇಲಿನ ಬಿಳಿಯ ಉಣ್ಣೆಯ ಶಾಲನ್ನು ತೆಗೆದು ತಿರುವು ಮುರುವು ಮಾಡಿ ಹೊದ್ದುಕೊಂಡು ನಗುತ್ತಲೇ "ನೀನು ಹೇಳಿದಂತೆ ಬಟ್ಟೆ ಬದಲಾಯಿಸಿರುವೆ" ಎಂದು ಹೇಳಿ ಒಳನಡೆದರಂತೆ.

* * *

ಗಾಂಧಿ–ಇರ್ವಿನ್ ಭೇಟಿ ಸಮಯ. ಆಗ ಗವರ್ನರ್ ಜನರಲ್ಲರು ಗಾಂಧೀಜಿಗೆ ಚಹಾ ಸೇವನೆಗೆ ಆಹ್ವಾನಿಸಿದ್ದರು. ಗಾಂಧೀಜಿ ಅವರು ತಮ್ಮ ಸೊಂಟದಲ್ಲಿದ್ದ ಪುಡಿಕೆಯಿಂದ ಚಿಟಕಿ ಉಪ್ಪನ್ನು ತೆಗೆದು

ಚಹಾದಲ್ಲಿ ಹಾಕಿಕೊಂಡರಂತೆ. ಹೀಗೇಕೆ ಎಂದು ಇರ್ವಿನ್‌ರು ಕೇಳಿದಾಗ ಗಾಂಧಿ ನಗುತ್ತಲೇ ಹೇಳಿದರಂತೆ. "ನಾವು ಬದುಕುವುದು ಉಪ್ಪಿನಿಂದ. ಸಕ್ಕರೆಯಿಂದಲ್ಲ" ಎಂದು ಹೇಳುತ್ತಲೇ ಚಹಾ ಕುಡಿದರಂತೆ.

* * *

1921ರ ಸಮಯ. ಕೆಲವು ನಿಯಮಗಳನ್ನು ಪಾಲಿಸಿದರೆ ಭಾರತಕ್ಕೆ ಒಂದು ವರ್ಷದಲ್ಲಿಯೇ ಸ್ವರಾಜ್ಯ ಸಿಗಬಹುದು ಎಂದು ಗಾಂಧಿಯವರು ಸಾರಿದರು. ಆದರೆ ಆ ವರ್ಷದ ಅಂತ್ಯದಲ್ಲಿ ಸರ್ಕಾರ ಗಾಂಧೀಜಿಯವರನ್ನು ಬಂಧಿಸಿ ಆರು ವರ್ಷ ಶಿಕ್ಷೆ ವಿಧಿಸಿತು. ಆರೋಗ್ಯ ಹದಗೆಟ್ಟುದುದರಿಂದ ಅವರನ್ನು ಬಿಡುಗಡೆ ಮಾಡಲಾಯಿತು. ಆಗ ಓರ್ವ ಜ್ಯೋತಿಷಿ "ನನ್ನ ಲೆಕ್ಕಾಚಾರದಂತೆ ನಿಮಗೆ ಒಂದು ಗಂಡಾಂತರವಿದೆ. ಅದರಿಂದ ನೀವು ಪಾರಾಗುವುದಿಲ್ಲ. ಆದುದರಿಂದ ನೀವು ಈ ರಾಜಕೀಯ ಬಿಟ್ಟು ದೇವರ ಧ್ಯಾನ ಮಾಡುವುದೇ ಒಳ್ಳೆಯದು" ಎಂದೇ ಹೇಳಿದನಂತೆ. ಅವನು ಹೇಳಿದ ಕಾಲ ತೀರಿಹೋಯಿತು. ಕೆಲವು ದಿನಗಳ ನಂತರ ಆ ಜ್ಯೋತಿಷಿಯನ್ನು ಭೇಟಿಯಾದ ಗಾಂಧೀಜಿ "ಏನು ಸ್ವಾಮಿ ತಾವು ಹೇಳಿದ ಗಡುವು ಮೀರಿದರೂ ನಾನು ಬದುಕಿಯೇ ಇರುವೆನಲ್ಲಾ" ಎಂದೇ ಹೇಳಿದಾಗ ಆ ಜ್ಯೋತಿಷಿ "ನನ್ನ ಶಾಸ್ತ್ರ ಸುಳ್ಳಲ್ಲ. ನಾನು ಹೇಳಿದಂತೆ ಗಂಡಾಂತರ ನಿಮ್ಮ ಬಳಿ ಬಂತು. ಆದರೆ ನೀವು ಏನೋ ಕಾರ್ಯದಲ್ಲಿ ತೊಡಗಿದಿರಿ ಹೀಗಾಗಿ ಅದಕ್ಕೆ ನಿಮ್ಮ ಬಳಿ ಬರಲಿಕ್ಕೆ ಆಗದೆ ಹೊರಟುಹೋಯಿತು" ಎಂದೇ ಹೇಳಿದನಂತೆ. ಆಗ ಗಾಂಧೀಜಿ ಅವರು ನಗುತ್ತಲೇ ಹೀಗೆ ಹೇಳಿದರಂತೆ "ಗ್ರಹಗಳಿಗೂ ನನ್ನನ್ನು ಕಂಡರೆ ಭಯ ಎಂದ ಮೇಲೆ ನಾನೆಷ್ಟು ಕೆಟ್ಟವನು ನೋಡಿ!!"

* * *

ಒಂದು ಬಾರಿ ಗಾಂಧೀಜಿ ಅವರು ಪ್ರಯಾಣ ಮಾಡುತ್ತಿದ್ದ ರೈಲು ಗಾಡಿ ಅಪಘಾತಕ್ಕೆ ಈಡಾಯಿತು. ಆಗ ಓರ್ವ ಪ್ರಯಾಣಿಕ ಗಾಂಧೀಜಿಯವರನ್ನು ಭೇಟಿ ಮಾಡಿ "ತಾವು ಈ ಗಾಡಿಯಲ್ಲಿದ್ದುದರಿಂದಲೇ ನಾವು ಅಪಾಯದಿಂದ ಪಾರಾದೆವು" ಎಂದನಂತೆ. ಆಗ ನಗುತ್ತಲೇ ಗಾಂಧೀಜಿ ಅವರು ಹೇಳಿದರಂತೆ. ಹೌದು, ನಾನು ಈ ಗಾಡಿಯಲ್ಲಿದ್ದುದರಿಂದಲೇ ಅಪಘಾತವಾಯಿತು. ನಾನು

ಇಲ್ಲದಿದ್ದರೆ ನೀವೆಲ್ಲರೂ ಸುರಕ್ಷಿತವಾಗಿಯೇ ಹೋಗುತ್ತಿದ್ದಿರಿ" ಎಂದಾಗ ನಗೆಯ ಹೊಳೆಯೇ ಹರಿಯಿತು.

* * *

ಗಾಂಧೀಜಿ ಅವರು ಪುರಿ ಜಗನ್ನಾಥಕ್ಕೆ ಭೇಟಿ ನೀಡಿದಾಗ ಅವರ ಹರಿಜನ ಆಂದೋಳನವನ್ನು ಪ್ರತಿಭಟಿಸಿದ ಓರ್ವ ಧರ್ಮಭೀರು ಕಪ್ಪು ಧ್ವಜ ನೀಡಿ ಪ್ರತಿಭಟಿಸಿದನಂತೆ. ಶಾಂತ ಸ್ವಭಾವದವರಾದ ಗಾಂಧೀಜಿ ಅವರು. "ಆ ಕಪ್ಪು ಧ್ವಜವನ್ನು ಕಾಣಿಕೆ ಎಂದೇ ಸ್ವೀಕರಿಸುವೆ. ಆದರೆ ನೀನು ನಿನ್ನ ಹೃದಯವನ್ನಾದರೂ ಬೆಳ್ಳಗೆ ಇಟ್ಟುಕೋ" ಎಂದೇ ಹಾಸ್ಯ ಮಾಡಿದರಂತೆ.

ಒಂದು ಬಾರಿ ಗಾಂಧೀಜಿಯವರ ಹಳೆಯ ಪರಿಚಯದವರು ಭೇಟಿಯಾದಾಗ ಗಾಂಧೀಜಿ ಅವರು "ಏನು ಬಹುದಿನದಿಂದ ನಿನ್ನ ಭೇಟಿಯೇ ಇಲ್ಲ" ಎಂದರು. ಆಗ ಆತ 'ನಾನು ಪಾಶ್ಚಿಮಾತ್ಯ ನಾಗರಿಕತೆ'ಯ ಮೇಲೆ ಒಂದು ಪುಸ್ತಕ ಬರೆಯುತ್ತಿರುವೆ ಹೀಗಾಗಿ ಭೇಟಿಯಾಗಲಿಲ್ಲ" ಎಂದು ಹೇಳಿದಾಗ ಮಹಾತ್ಮರು ನಗುತ್ತಲೇ, "ಓ ಹಾಗೆಯೇ ಅದು ಆದಷ್ಟು ಬೇಗ ಅಲ್ಲಿ ತಲುಪಲಿ" ಎಂದೇ ಹಾಸ್ಯ ಮಾಡಿದರಂತೆ.

* * *

ಒಂದು ಸಾರ್ವಜನಿಕ ಸಭೆಯಲ್ಲಿ ಗಾಂಧೀಜಿ ಅವರು ಮಾತನಾಡುತ್ತಿದ್ದಾಗ ಧ್ವನಿವಾಹಕ ಯಂತ್ರ ಕೆಟ್ಟು ಹೋಯಿತು. ನೆರೆದ ಜನರು ಲೌಡ್ ಸ್ಪೀಕರ್ ಎಂದು ಕೂಗತೊಡಗಿದರು. ಆಗ ಗಾಂಧೀಜಿ ಅವರು ಶಾಂತ ರೀತಿಯಿಂದ ಹೀಗೆ ಹೇಳಿದರು. "ನಾಮಕಾ ಲೌಡ್ ಸ್ಪೀಕರ್ ಕಾಮ ಕಾ ನಹೀ" ಎಂದೇ ಹೇಳಿ ತಮ್ಮ ಭಾಷಣ ಮುಂದುವರಿಸಿದರು. ಆಗ ಸಭೆಯಲ್ಲಿದ್ದ ಓರ್ವರು can't hear ಎಂದೇ ಕೂಗಿದರಂತೆ. ಗಾಂಧೀಜಿ ನಗುತ್ತಲೇ ಹೀಗೆ ಹೇಳಿದರು. "If I hear less, you will hear more". ಆಗ ಸಭೆಯಲ್ಲಿ ಶಾಂತಿ ನೆಲಸಿತು.

* * *

ಹರಿಜನ ನಿಧಿ ಸಂಗ್ರಹದ ಸಮಯ ಗಾಂಧೀಜಿ ಅವರು ಒಂದು ಸಭೆಯಲ್ಲಿ ಮಾತನಾಡುತ್ತಿದ್ದರು. ಆ ಸಭೆಯಲ್ಲಿ ಗಾಂಧೀಜಿಯವರ ಹರಿಜನ

ಕಾರ್ಯವನ್ನು ವಿರೋಧಿಸಿದ ಹಲವರು ತತ್ತಿ, ಟೊಮೋಟ ಏನೆಲ್ಲಾ ಬಿಸಾಡಿದರು. ಅದರಲ್ಲಿ ಒಂದು ಚಪ್ಪಲಿ ಕೂಡಾ ಗಾಂಧೀಜಿಯವರ ಬಳಿ ಬಂದು ಬಿದ್ದಾಗ ಅವರು ಶಾಂತ ಚಿತ್ತದಿಂದಲೇ ತಮ್ಮ ಬಳಿ ಇದ್ದ ಸುಧಾಕರ ಚತುರ್ವೇದಿಗೆ ಹೀಗೆ ಹೇಳಿದರಂತೆ. "ಏ ಕರ್ನಾಟಕೀ ಈ ಚಪ್ಪಲಿಯನ್ನು ಜೋಪಾನವಾಗಿರಿಸು. ಮತ್ತೊಂದನ್ನು ಪುಣ್ಯಾತ್ಮರು ಒಗೆದಲ್ಲಿ ಈ ಜೋಡಿ ಚಪ್ಪಲಿಗಳನ್ನು ಬಡವರಿಗೆ ನೀಡಬಹುದು."

* * *

ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆಯ ಅಧ್ಯಕ್ಷರು ಗಾಂಧೀಜಿ. ಒಂದು ಬಾರಿ ಪ್ರಚಾರಕರು ಗಾಂಧೀಜಿಯವರ ಕೈಯಿಂದಲೇ ತಮ್ಮ ಸನದುಗಳನ್ನು ಪಡೆಯಲು ಬಯಸಿದರು. ಗಾಂಧೀಜಿ ಕಾಲಹರಣವಾಗುತ್ತದೆ ಬೇಡ ಎಂದರೂ ಪ್ರಚಾರಕರು ಒತ್ತಾಯಿಸಿದರು. ಆಗ ಅನಿವಾರ್ಯವಾಗಿ ಗಾಂಧೀಜಿ ಸನದುಗಳನ್ನು ನೀಡಿ ಶಾಲು ಹೊದಿಸಲು ಒಪ್ಪಿಕೊಂಡರು. ಆಗ ಚಮತ್ಕಾರದ ಒಂದು ಘಟನೆ ನಡೆಯಿತು. ಅದೇನೆಂದರೆ ಓರ್ವ ಪ್ರಚಾರಕಳ ಹೆಸರು 'ಬೇಬಿ' ಎಂದಿತ್ತು. ಆಕೆಗೆ ಶಾಲು ಹೊದಿಸಿದ ಗಾಂಧೀಜಿ ಅವರು 'ಬೇಬಿ ಬಡಾ ಹೈ' ಎಂದಾಗ ಇಡೀ ಸಭೆ ನಗೆಗಡಲಿನಲ್ಲಿ ಮುಳುಗಿಹೋಯಿತು.

* * *

ಒಂದು ಸಾರ್ವಜನಿಕ ಸಭೆ. ಸಭೆಗೆ ಬಂದವರು ಥರ ಥರವಾದ ಕಾಣಿಕೆಗಳನ್ನು ಗಾಂಧೀಜಿಗೆ ನೀಡಿದ್ದರು. ಅದರಲ್ಲಿ ಗಾಂಧೀಜಿಯವರದೇ ಒಂದು ಮೂರ್ತಿ ಇತ್ತು. ಸಾರ್ವಜನಿಕರಿಂದ ಬಂದ ಕಾಣಿಕೆಗಳನ್ನು ಅದೇ ಸಭೆಯಲ್ಲಿ ಹರಾಜು ಹಾಕುವ ಒಂದು ಪರಿಪಾಠವನ್ನು ಅವರು ಅನುಸರಿಸುತ್ತಿದ್ದರು. ತಮಗೆ ಕಾಣಿಕೆ ಎಂದು ಬಂದ ತಮ್ಮ ಮೂರ್ತಿಯನ್ನೇ ಕೈಯಲ್ಲಿ ಹಿಡಿದುಕೊಂಡು 'ಕಿಸೀ ಬುಡೇಕೀ ಸುಂದರಮೂರ್ತಿ ಹೈ' ಎಂದೇ ಕೂಗಿ ಹೇಳಿದರಂತೆ. ಹೀಗೆ ಅವರು ಕೂಗಿದಾಗ ಆ ಮೂರ್ತಿ ರೂ. 1,700ಕ್ಕೆ ಮಾರಾಟವಾಯಿತು.

* * *

ಹಾಸ್ಯ ಎಂಬುದು ಅತ್ಯಂತ ಮೃದು ಹಾಗೂ ಸೂಕ್ಷ್ಮವಾದದ್ದು. ಆದುದರಿಂದ ಗಾಂಧೀಜಿ ಅವರು ಹಾಸ್ಯ ಔಚಿತ್ಯವನ್ನು ಮೀರಿ ಹೋಗಲು ಆಸ್ಪದವನ್ನೇ ನೀಡುತ್ತಿರಲಿಲ್ಲ. ಏಕೆಂದರೆ ಅದೊಂದು ಕುಸುಮಾಸ್ತ್ರ. ಅದರಿಂದ ಕೆಲವು ವೇಳೆ ಇತರರಿಗೆ ನೋವು ಸಂಭವಿಸಬಹುದು ಎಂಬುದನ್ನು ಅವರು ಅರಿತಿದ್ದರು. ಆದರೂ ಹಾಸ್ಯ ಆರೋಗ್ಯಕ್ಕೆ ಒಳ್ಳೆಯದು ಎಂದೇ ಅವರ ಭಾವನೆಯಾಗಿತ್ತು.

* * *

ಗಾಂಧೀಜಿ ಅವರು ತಮ್ಮ ಆರೋಗ್ಯ ಸುಧಾರಣೆಗೆಂದೇ ಮೈಸೂರಿನ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರ ಆಮಂತ್ರಣದ ಮೇರೆಗೆ ನಂದಿ ಬೆಟ್ಟದಲ್ಲಿ ತಂಗಿದ್ದರು. ಗಾಂಧೀಜಿಯವರನ್ನು ಯಾರೂ ಬರಿಗೈಯಿಂದ ಬಂದು ನೋಡುತ್ತಿರಲಿಲ್ಲ. ಬಂದ ಓರ್ವ ಗೃಹಸ್ಥ ಗಾಂಧೀಜಿಯವರಿಗೆ ಒಂದು ಪುಟ್ಟ ರಸಭರಿತ ಕಿತ್ತಲೆ ಹಣ್ಣು ತಂದಿದ್ದ. ಗಾಂಧೀಜಿಯೊಂದಿಗೆ ರಾಜಾಜಿ ಅವರು ಇದ್ದರು. ಗಾಂಧೀಜಿ ಆ ಹಣ್ಣಿನ ಬುಟ್ಟಿಯನ್ನು ಮುಟ್ಟಿ ದಾರಿಯಲ್ಲಿ ಕಾಣುವ ಬಡವರಿಗೆ ಹಂಚಿರಿ ಎಂದರಂತೆ. ಆದರೆ ಪಕ್ಕದಲ್ಲಿ ರಾಜಾಜಿಯವರ ದೃಷ್ಟಿ ಆ ಬುಟ್ಟಿಯ ಮೇಲೆ ಇದ್ದದನ್ನು ಕಂಡು ಅವರಿಗೆ ರಾಜಾಜಿ ಮೇಲೆ ಕನಿಕರ ಉಂಟಾಗಿ "ರಾಜಾಜಿ ತುಂಬಾ ಆಸೆಯಿಂದ ನೋಡುತ್ತಿದ್ದಾರೆ ರಾಜಾಜಿಯು ಯೋಗಿಯೂ ಹೌದು, ಭೋಗಿಯೂ ಹೌದು" ಪುಟ್ಟಿ ಇಲ್ಲಿಯೇ ಇರಲಿ ಎಂದು ನಗೆಯಾಡಿದರಂತೆ.

* * *

ಎರಡನೇ ದುಂಡು ಮೇಜಿನ ಪರಿಷತ್ತಿಗೆ ಗಾಂಧೀಜಿ ಅವರು ಹೋದಾಗ ನಡೆದ ಒಂದು ಘಟನೆ. ಗಾಂಧೀಜಿ ಅವರು ತಮ್ಮ ತುಂಡು ಪಂಚೆಯನ್ನೇ ತೊಟ್ಟುಕೊಂಡು ಸಭೆಗೆ ಹೋದರು. ಇಂಡಿಯಾ ರಾಜ್ಯದ ಕಾರ್ಯದರ್ಶಿಗಳಾದ ಸರ್ ಸ್ಯಾಮುಯಲ್ ಹೋರ್ ಅವರು ಗಾಂಧೀಜಿಯವರನ್ನು ಅರಸನಿಗೆ ಪರಿಚಯಿಸಿದಾಗ ಚಕ್ರವರ್ತಿ ಜಾರ್ಜ್‌ರವರು "ನನ್ನ ಚಕ್ರಾಧಿಪತ್ಯದಲ್ಲಿ ನೀವು ನನ್ನ ಪ್ರಜೆಗಳನ್ನು ನನ್ನ ವಿರುದ್ಧ ಎತ್ತಿ ಕಟ್ಟುತ್ತೀರಿ" ಎಂದೇ ಗುಡುಗಿದರಂತೆ. ಇದನ್ನು ಕಂಡ ಅತಿಥಿಗಳೆಲ್ಲರೂ ಗಾಬರಿಯಾದರು. ಆಗ ಶಾಂತಚಿತ್ತರಾದ ಗಾಂಧೀಜಿ ಅವರು ಪ್ರಶ್ನೆಗೆ ನೇರ ಉತ್ತರ ನೀಡದೆ "ನಾನು ಈಗ ನಿಮ್ಮ

ಅತಿಥಿ. ಉತ್ತರ ನೀಡಿ ನಿಮಗೆ ನೋವನ್ನುಂಟು ಮಾಡಲಾರೆ" ಎಂದೇ ಹಾಸ್ಯ ಚಟಾಕಿ ಹಾರಿಸಿದರಂತೆ.

* * *

ಪೂನಾ ಒಪ್ಪಂದದ ಸಮಯ. ಅಂಬೇಡ್ಕರರು ಹರಿಜನರಿಗಾಗಿ ಅಛೂತಿ ಸ್ಥಾನದ ಬೇಡಿಕೆ ಸರ್ಕಾರದ ಮುಂದೆ ಮಂಡಿಸಿದ್ದರು. ಆಗ ಹಾಸ್ಯದಿಂದಲೇ ಗಾಂಧೀಜಿ ಅವರು ಅಂಬೇಡ್ಕರರಿಗೆ ಹೀಗೆ ಹೇಳಿದರಂತೆ "ನಾನೇ ದೊಡ್ಡ ಅಧೂತ್ ಆದುದರಿಂದ ಈ ದೇಶವೇ ಒಂದು ದೊಡ್ಡ ಅಛೂತಿ ಸ್ಥಾನ. ಹೀಗಾಗಿ ನಿಮಗೆ ಅಧೂತ ಸ್ಥಾನ ನೀಡುವ ಪ್ರಶ್ನೆಯೇ ಇಲ್ಲ" ಎಂದರಂತೆ.

* * *

ಗಾಂಧೀಜಿ ನಂದಿ ಬೆಟ್ಟದಲ್ಲಿದ್ದಾಗ ಮೈಸೂರಿನಿಂದ ಬಂದ ಮಹಿಳೆಯೊಬ್ಬಳು ಅವರಿಗೆ ದ್ರಾಕ್ಷಿ ಹಣ್ಣು ನೀಡಿ ನಮಸ್ಕಾರ ಮಾಡುತ್ತಾ ನನಗೆ ಮಕ್ಕಳಿಲ್ಲ. ಆಶೀರ್ವಾದ ಮಾಡಬೇಕೆಂದು ಕೇಳಿದಳಂತೆ. ಆಗ ಗಾಂಧೀಜಿ ಅವರು ನಗುತ್ತಲೇ ಹೇಳಿದ್ದು "ನಾನೇನು ವರ ನೀಡುವ ಸಂಜೀವರಾಯನೆ? ಮಕ್ಕಳಿಲ್ಲದೇ ಹೋದಲ್ಲಿ ಅನೇಕ ಬಡ ಮಕ್ಕಳಿದ್ದಾರೆ; ಯಾರನ್ನಾದರೂ ದತ್ತು ತೆಗೆದುಕೊಂಡು ಅವರಿಗೆ ಸಹಾಯ ಮಾಡಬಹುದಲ್ಲವೆ?"

* * *

ಯಾರೋ ಒಬ್ಬರು ಗಾಂಧೀಜಿಯವರಿಗೆ ಐ.ಸಿ.ಎಸ್. ಬಗ್ಗೆ ನಿಮ್ಮ ಅಭಿಪ್ರಾಯವೇನು ಎಂದು ಕೇಳಿದರಂತೆ. ಆಗ ಗಾಂಧೀಜಿ ಅವರು ನಗುತ್ತಲೇ ಐ.ಸಿ.ಎಸ್. ಖಚಿತವಾಗಿಯೂ ಇಂಡಿಯನ್ ಸಿವಿಲ್ ಸರ್ವೀಸ್ ಅಲ್ಲ. ಅದು ಇ.ಸಿ.ಎಸ್. ಅಂದರೆ ಇಂಗ್ಲೀಷ್ ಸಿವಿಲ್ ಸರ್ವೀಸ್ ಎಂದೇ ಹೇಳಿದರಂತೆ. ಏಕೆಂದರೆ ಅವರು ಭಾರತವನ್ನು ಪರಾಡಳಿತದಲ್ಲಿರಿಸಿ ಕೇವಲ ಇಂಗ್ಲೆಂಡಿನ ಏಳಿಗೆಗಾಗಿ ಕಾರ್ಯ ಮಾಡುವವರು ಎಂದರಂತೆ.

* * *

ಗಾಂಧೀಜಿ ಅವರು ಎರಡನೆ ದುಂಡು ಮೇಜಿನ ಪರಿಷತ್ತಿಗೆ ತೆರಳಿದಾಗ ಇಂಗ್ಲೆಂಡ್‌ನಲ್ಲಿ ಓರ್ವ ಪತ್ರಕರ್ತ ಕೇಳಿದ "ಗಾಂಧೀಜಿ, ನೀವು ಭಾರತದ ಸ್ವಾತಂತ್ರ್ಯಕ್ಕೆ ಹೋರಾಟ ನಡೆಸಿರುವಿರಿ. ಈ ನಿಟ್ಟಿನಲ್ಲಿ ತಾವು ಎಷ್ಟರಮಟ್ಟಿಗೆ ಬ್ರಿಟಿಷ್ ಚಕ್ರಾಧಿಪತ್ಯ ಸಂಪರ್ಕ ಕಡಿದುಕೊಳ್ಳಲು ಇಚ್ಛಿಸುವಿರಿ?" ಆಗ ಗಾಂಧೀಜಿ ನಗುತ್ತಲೇ ಹೇಳಿದರಂತೆ, "ಚಕ್ರಾಧಿಪತ್ಯದ ಸಂಪರ್ಕವನ್ನು ಸಂಪೂರ್ಣ ಕಡಿದುಕೊಳ್ಳಲು ಬಯಸುವೆ ಆದರೆ ಬ್ರಿಟಿಷ್ ಜನಾಂಗದ ಸಂಪರ್ಕ ಸಂಪೂರ್ಣವಾಗಿ ಕಡಿದುಕೊಳ್ಳುವುದಿಲ್ಲ".

* * *

ಗಾಂಧೀಜಿಯವರ ಅಭಿಪ್ರಾಯದಲ್ಲಿ ಕೋಪವನ್ನು ಅಡಗಿಸುವ ಅಸ್ತ್ರ ಎಂದರೆ ಹಾಸ್ಯ

* * *

ಇಂಗ್ಲೆಂಡಿನಲ್ಲಿ ಓರ್ವ ಮಹಿಳೆ "ಗಾಂಧೀಜಿ, ನೀವು ಯಾವಾಗಲಾದರೂ ಕೋಪಿಸಿಕೊಂಡಿದ್ದಿರಾ ಎಂದೇ ಕೇಳಿದಾಗ ಗಾಂಧೀಜಿ ನಸುನಗುತ್ತಲೇ "ಕಸ್ತೂರಿಬಾರನ್ನು ಕೇಳಿ" ಎಂದರಂತೆ. ಏಕೆಂದರೆ "ನಾನು ಜಗತ್ತಿನ ಎಲ್ಲರೊಂದಿಗೂ ಚೆನ್ನಾಗಿ ನಡೆದುಕೊಳ್ಳುತ್ತೇನೆ ಆದರೆ ಅವರ ವಿಷಯದಲ್ಲಿ ಹಾಗಲ್ಲ ಎಂದೇ ಹೇಳುತ್ತಾಳೆ" ಎಂದಾಗ ಆ ಮಹಿಳೆ ಆದರೆ "ನನ್ನ ಗಂಡ ನನ್ನ ಹತ್ತಿರ ತುಂಬಾ ಚೆನ್ನಾಗಿಯೇ ನಡೆದುಕೊಳ್ಳುತ್ತಾನೆ" ಎಂದೇ ಹೇಳಿದಾಗ ಗಾಂಧೀಜಿ ಗಹಗಹಿಸಿ ನಗುತ್ತಾ "ಹೌದು, ಸಂದೇಹವೇ ಇಲ್ಲ ನೀವು ನಿಮ್ಮ ಪತಿಗೆ ತುಂಬಾ ಲಂಚ ನೀಡಿರಬೇಕು" ಎಂದರಂತೆ!

* * *

ಗಾಂಧೀಜಿಯವರನ್ನು ಅರಿಯಬೇಕಾದರೆ ಅವರಲ್ಲಿದ್ದ ಹಾಸ್ಯ ಪ್ರಜ್ಞೆಯನ್ನು ಅರಿಯಲೇಬೇಕು. ಈ ಹಾಸ್ಯ ಪ್ರಜ್ಞೆಯೇ ಅವರನ್ನು ಶಾಂತಿ, ಸಮಾಧಾನದಿಂದ ಇರಲು ಸಹಾಯ ಮಾಡಿತು. ಎಂಥ ಒತ್ತಡದಲ್ಲಿಯೂ ಅವರು ತಮ್ಮ ಮಾನಸಿಕ ಸಮತೋಲನೆಯನ್ನು ಕಳೆದುಕೊಳ್ಳುತ್ತಿರಲಿಲ್ಲ. ಅದರ ಗುಟ್ಟು ಹಾಸ್ಯಪ್ರಜ್ಞೆ.

* * *

ಎಲ್ಲಾ ಒತ್ತಡಗಳಿಗೆ ರಾಮಬಾಣ ಎಂದರೆ ಹಾಸ್ಯ ಎಂದೇ ಗಾಂಧೀಜಿಯವರ ನಂಬಿಕೆ. ಹೀಗಾಗಿ ಅವರು ಆರೋಗ್ಯಕರ ಜೀವನ ನಡೆಸಲು ಸಾಧ್ಯವಾಯಿತು.

* * *

ಒಂದು ಬಾರಿ ಓರ್ವ ವರದಿಗಾರ "ಶ್ರೀಮಂತರ ಬಗೆಗೆ ನಿಮ್ಮ ಅಭಿಪ್ರಾಯ ಏನು?" ಎಂದು ಕೇಳಿದಾಗ, ಗಾಂಧೀಜಿ ಅವರು "ನಾನು ಅವರ ಹಣವನ್ನು ತುಂಬಾ ಪ್ರೀತಿಸುತ್ತೇನೆ" ಎಂದು ಹೇಳಿದರಂತೆ.

* * *

ಶ್ರೀಮತಿ ಸರೋಜಿನಿ ನಾಯ್ಡು ಅವರು ಗಾಂಧೀಜಿಯವರನ್ನು ತೀರಾ ಹತ್ತಿರದಿಂದ ನೋಡಿದವರು. ಅವರ ಹೇಳಿಕೆಯಂತೆ ಎಂಥಾ ಗಂಭೀರ ವಿಷಯವೇ ಇರಲಿ ಗಾಂಧೀಜಿ ಅವರು ಅದನ್ನು ಹಾಸ್ಯದಿಂದ ತಿಳಿಗೊಳಿಸುತ್ತಾರೆ. ಹೀಗಾಗಿ ಅವರ ಖಚಿತ ಅಭಿಪ್ರಾಯ ಏನು ಎಂಬುದನ್ನು ಹೇಳಲಾಗದು.

* * *

ಒಮ್ಮೆ ಗಾಂಧೀಜಿ ಹಿಂದೀ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಲೆಂದೇ ಇಂದೋರಿಗೆ ಹೋಗಿದ್ದರು. ಆಗ ತುಕ್ಕೋಜಿರಾವ್ ಹೋಳ್ಕರರು ಸಮ್ಮೇಳನದ ಪ್ರತಿನಿಧಿಗಳಿಗೆಂದೇ ಸುಗ್ರಾಸ ಭೋಜನ ಏರ್ಪಡಿಸಿದ್ದರಂತೆ. ಊಟದಲ್ಲಿ ನಾಲ್ಕು ಸಿಹಿ ಭಕ್ಷ್ಯಗಳು, ನಾಲ್ಕು ಖಾರದ ತಿನಿಸುಗಳು, ಅನ್ನ ಚಪಾತಿ, ಪರೋಟ ವಗೈರೆ. ಈ ಎಲ್ಲಾ ತಿನಿಸುಗಳನ್ನು ಶುದ್ಧ ತುಪ್ಪದಲ್ಲಿ ಮಾಡಿಸಿದ್ದರಂತೆ. ಪ್ರತಿನಿಧಿಗಳನ್ನು ಬೀಳ್ಕೊಡುವಾಗ ಗಾಂಧೀಜಿ ಅವರು ನಗುತ್ತಲೇ ಹೋಳ್ಕರರಿಗೆ ಹೀಗೆ ಹೇಳಿದರಂತೆ. "ನನಗೆ ಊಟದಲ್ಲಿ ಇಷ್ಟೆಲ್ಲಾ ವಿಧಗಳಿವೆ ಎಂದೇ ಗೊತ್ತಿರಲಿಲ್ಲ. ನಿಮ್ಮ ಊಟದಿಂದ ಹಿಂದೀ ಪ್ರಚಾರಕ್ಕೆ ಒಳ್ಳೆ ಆಸ್ಪದ ದೊರೆಯುತ್ತದೆ."

* * *

ಸೇವಾ ಗ್ರಾಮದ ಒಂದು ಘಟನೆ ಸೇವಾ ಗ್ರಾಮದಲ್ಲಿ ಮೂಲ ಶಿಕ್ಷಣ ಕುರಿತು ಒಂದು ಅಧಿವೇಶನ. ಅಲ್ಲಿ ಬೆಳಗಿನ ಪ್ರಾರ್ಥನೆಯ ನಂತರದ ತಿಂಡಿ ಎಂದರೆ ಒಂದು ಕಿತ್ತಲೆ ಹಣ್ಣು ಮತ್ತು ಅರ್ಧ ಬಟ್ಟಲು ಹಾಲು. ಇದು ಸುಧಾಕರ ಚತುರ್ವೇದಿಯವರಿಗೆ ಆಗದು. ಹೀಗಾಗಿ ಅವರು ಜಮನ್‌ಲಾಲ್ ಅವರ ಕಾರಿನಿಂದ ವಾರ್ಧಾಕ್ಕೆ ತೆರಳಿ ಹೋಟೆಲ್‌ನಿಂದ ತಿಂಡಿ ತಂದು ಆಶ್ರಮದಲ್ಲಿ ಬಿಸಿ ಮಾಡಿಕೊಂಡು ತಿನ್ನುತ್ತಿದ್ದರಂತೆ. ಇದು ಗಾಂಧೀಜಿಗೆ ತಿಳಿದಾಗ ನಗುತ್ತಲೆ ಹೀಗೆ ಹೇಳಿದರು. ನನ್ನ ಎದುರಿಗೆ ನನ್ನ ವ್ಯಕ್ತಿತ್ವಕ್ಕೆ ನೀರು ಉಗ್ಗುತ್ತಿಯಲ್ಲ ಎಂದೇ ಚಟಾಕಿ ಹಾರಿಸಿದರು.

* * *

ಬೆಂಗಳೂರಿನಲ್ಲಿಯೇ ಹಿಂದೀ ಸಾಹಿತ್ಯ ಮಂಡಳಿಯ ವಾರ್ಷಿಕೋತ್ಸವಕ್ಕೆ ಗಾಂಧೀಜಿ ಬಂದಿದ್ದರು. ಹಿಂದೀ ಸಾಹಿತ್ಯ ಮಂಡಲಿಯ ಅಧ್ಯಕ್ಷೆ ಲೋಕ ಸುಂದರೀ ರಾಮನ್, ಸಿ. ವಿ. ರಾಮನ್‌ರ ಮಡದಿ. ಅವರ ಫಜೀತಿ ಎಂದರೆ ಹಿಂದೀ ಬಾರದೇ ಇರುವುದು ಮತ್ತು ಕನ್ನಡ ಅಭ್ಯಾಸವಿಲ್ಲದಿರುವುದು. ಹೀಗಾಗಿ ಯಾರಿಂದಲೋ ಕನ್ನಡ ಬರೆಸಿಕೊಂಡು ಸ್ವಾಗತ ಭಾಷಣ ಮಾಡಿದರಂತೆ. ಇದನ್ನು ಕಂಡ ಗಾಂಧೀಜಿ ಸಂತೋಷದಿಂದಲೇ "ನಾನು ಬೆಂಗಳೂರಿನಲ್ಲಿದ್ದರೆ ಕನ್ನಡ ಕಲಿತುಬಿಡುತ್ತೇನೆ" ಎಂದು ಹೇಳಿದರಂತೆ.

* * *

ಗಾಂಧೀಜಿ ಅವರು ತಮ್ಮ ಆರೋಗ್ಯ ಸುಧಾರಣೆಗೆ ನಂದಿ ಬೆಟ್ಟದಲ್ಲಿದ್ದರು. ಆ ಸಮಯದಲ್ಲಿ ಸರ್ ಸಿ. ವಿ. ರಾಮನ್, ಪ್ರೊ ರ್‍ಹೋಮ್ (Rohm) ಎಂಬ ಸ್ವಿಜ್ಜರ್ಲೆಂಡ್ ವಿಜ್ಞಾನಿಯೊಂದಿಗೆ ಗಾಂಧೀಜಿ ಭೇಟಿಗೆ ಬಂದಿದ್ದರು. ಮಾತು, ಮತಗಳಲ್ಲಿನ ಅಸಂಖ್ಯಾತ ಕೋಮುಗಳ ಬಗ್ಗೆ ನಡೆದಿತ್ತು. ಬಂದವರು "ಹೇಗೆ ಇವರನ್ನು ಒಂದುಗೂಡಿಸುವಿರಿ?" ಎಂದಾಗ ಗಾಂಧೀಜಿ ಹೇಳಿದರು "ನಾನಾ ಆಕಾರಗಳಿದ್ದರೂ ನಾವು ಪೂಜಿಸುವುದು ಒಬ್ಬ ದೇವರನ್ನೇ." ಆದರೆ ಆ ವಿಜ್ಞಾನಿ ಒಪ್ಪಲಿಲ್ಲ. ಆಗ ಬಳಿಯಲ್ಲಿಯೇ ಇದ್ದ ಸರ್ ಸಿ. ವಿ. ರಾಮನ್ ವಿಜ್ಞಾನಿಗಳು ಮಾತ್ರ ಒಗ್ಗಟ್ಟನ್ನು ತರಲು ಸಮರ್ಥರು ಎಂದರಂತೆ. ಆಗ ಗಾಂಧೀಜಿ ಅವರು ನಗುತ್ತಲೇ "ನೀವೆಲ್ಲಾ ಸೇರಿ ಒಂದೇ 'ಕಲ್ಮಾ' ಮಾಡಿಕೊಳ್ಳಿ" ಎಂದರಂತೆ.

* * *

ಕೊಚ್ಚಿಯಲ್ಲಿ ಹಲವಾರು ಪಾದ್ರಿಗಳು ಮತ್ತು ಮೌಲ್ವಿಗಳು ಬಂದು ಮತಗಳ ಬಗೆಗೆ ಗಾಂಧೀಜಿಯವರೊಂದಿಗೆ ವಾದಕ್ಕಿಳಿದರು. ಮೌಲಿಗಳು "ಗಾಂಧೀಜಿ ನೀವು ಮಾಡುವ ಕಾರ್ಯಗಳು ಮುಸಲ್ಮಾನರ ಮತಕ್ಕೆ ಅನುಕೂಲವಾಗಿವೆ, ನೀವೇಕೆ ಮುಸಲ್ಮಾನರಾಗಬಾರದು?" ಎಂದರಂತೆ. ಆಗ ಪಾದ್ರಿಗಳು ಹೇಳಿದರಂತೆ. "ಗಾಂಧೀಜಿ, ನೀವು ಜೀವಂತ ಕ್ರಿಸ್ತನಂತೇ ಇದ್ದಿರಿ. ಆದರೆ ಕ್ರೈಸ್ತರಾಗುವವರೆಗೂ ನಿಮಗೂ ಹಾಗೂ ಹರಿಜನರಿಗೂ ಮೋಕ್ಷವಿಲ್ಲ" ಎಂದರಂತೆ. ಆಗ ಗಾಂಧೀಜಿ ಅವರು ನಗುತ್ತಲೇ "ನಾನು ಹಿಂದೂ, ಹಾಗಾದರೆ ನನಗೂ ಮೋಕ್ಷವಿಲ್ಲ. ನೀವೇ ಖುಷಿಯಿಂದ ಮೋಕ್ಷಕ್ಕೆ ಹೋಗಿಬಿಡಿ" ಎಂದರಂತೆ.

* * *

ಹಾಸ್ಯ ನಿತ್ಯ ನೂತನ. ಸಮಯ ಸ್ಫೂರ್ತಿಯಿಂದ ಹೊರ ಹೊಮ್ಮುವ ಹಾಸ್ಯ ನಿತ್ಯ ನೂತನವಾಗಿರುತ್ತದೆ. ಹಿಂದೆಯೇ ಯೋಚಿಸಿ ಅಥವಾ ಪೂರ್ವಗ್ರಹ ಪೀಡಿತ ಹಾಸ್ಯ ಆನಂದ ನೀಡಲಾರದು.

* * *

ಜಪಾನ್ ಗಾಂಧೀ ಎಂದೇ ಹೆಸರುವಾಸಿಯಾಗಿದ್ದ ಕಗವಾ "ನಿಮ್ಮ ದೇಶಗಳಲ್ಲಿ ಹತ್ತು ವರ್ಷಕ್ಕೆ ಒಂದು ಬಾರಿ ಬರ ಬರುತ್ತದಲ್ಲವೆ?" ಎಂದು ಕೇಳಿದರು. ಆಗ ಗಾಂಧೀಜಿ ನಗುತ್ತಲೇ ಹೇಳಿದರಂತೆ "ಹಾಗಲ್ಲ, ಬರ ನಮ್ಮ ಆಪ್ತಮಿತ್ರ. ಹೀಗಾಗಿ ನಮ್ಮಲ್ಲಿ ಪ್ರತಿ ವರ್ಷ ಬರ ಇದ್ದೇ ಇರುತ್ತದೆ".

* * *

1946ರ ಸಮಯ, ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಗೆಂದು ಗಾಂಧೀಜಿ ಬಂದಿದ್ದರು. ಅವರು ತಮ್ಮ ಕೊನೆಯ ದಿನ ಅಡುಗೆ ಮನೆಗೆ ಭೇಟಿ ನೀಡಿ ಅಡುಗೆಯವರನ್ನು ಹೊಗಳಿದಾಗ ಸ್ವಾಗತ ಸಮಿತಿಯ ಸದಸ್ಯರೋರ್ವರು ಮುಖ್ಯ ಅಡಿಗೆಯವನನ್ನು "ಇವರು ಪೆರಿಯ ಅಯ್ಯರ್" ಎಂದು ಪರಿಚಯಿಸಿದರು. ಆಗ ಅವರು ನಗುತ್ತಲೇ "ಪೆರಿಯ ಅಯ್ಯರ್, ಪೆರಿಯಸ್ವಾಮಿ, ಪೆರಿಯ ಸಾಪಾಡ್" ಎಂದೇ ಹಾಸ್ಯ ಮಾಡಿದರಂತೆ.

* * *

1924ರಲ್ಲಿ ಕರ್ನಾಟಕ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಗಾಂಧೀಜಿಯವರೇ ಅಧ್ಯಕ್ಷರು. ಅವರು ಎಲ್ಲಿಯೇ ಹೋಗಲಿ ಮೊದಲು ಅಡಿಗೆ ಮನೆ ಹಾಗೂ ಪಾಯಖಾನೆ ಶುಚಿಯಾಗಿವೆಯೋ ಎಂಬುದನ್ನು ಪರೀಕ್ಷಿಸುತ್ತಿದ್ದರು. ಒಂದು ದಿನ ಅವರು ಸ್ವಯಂ ಸೇವಕರೊಂದಿಗೆ ಮಾತನಾಡುವಾಗ "ನೀವು ನಿಮ್ಮ ಕಾರ್ಯವನ್ನು ತುಂಬಾ ಎಚ್ಚರಿಕೆಯಿಂದ ಮಾಡದೇ ಹೋದಲ್ಲಿ ನಾನು ನೇಮಿಸಿದ ಗೂಢಚಾರಿಗಳು ವರದಿ ಮಾಡುತ್ತಾರೆ" ಎಂದೇ ಹೇಳಿದರಂತೆ. ಆಗ ಸ್ವಯಂ ಸೇವಕರು ಗಾಬರಿಗೊಂಡು ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು. ಆಗ ನಗುತ್ತಲೇ ಗಾಂಧೀಜಿ ಅವರು ಹೇಳಿದರು. "ನನ್ನ ಗೂಢಾಚಾರಿಗಳು ಬೇರೆ ಯಾರು ಅಲ್ಲ ನೊಣಗಳು".

* * *

ಗಾಂಧೀಜಿಯವರ ಪ್ರಾರ್ಥನಾ ಸಭೆಯಲ್ಲಿ ಸಾಮಾನ್ಯವಾಗಿ ರಘುಪತಿ ರಾಘವ ಭಜನೆ ಹಾಡಲಾಗುತ್ತಿತ್ತು. ಗಾಂಧೀಜಿಯವರ ಒಡನಾಡಿಯಾಗಿದ್ದ ಸುಧಾಕರ ಚತುರ್ವೇದಿ ಭಜನೆ ಹಾಡದಿದ್ದಾಗ "ಅದೇನು ಎಲ್ಲರೂ ಮುಸಲ್ಮಾನರೂ ಸೇರಿದಂತೆ ಭಜನೆ ಮಾಡುತ್ತಿರುವಾಗ ನೀನೇಕೆ ಸುಮ್ಮನಿದ್ದೀಯ?" ಎಂದೇ ಕೇಳಿದರಂತೆ. ಆಗ ಚತುರ್ವೇದಿಯವರು "ರಾಮ, ಲಕ್ಷ್ಮಣ, ಸೀತೆ ನನಗೆ ದೇವರುಗಳೆಲ್ಲ ಒಂದೇ ಹೇಳಿ "ಈ ಗುಂಪಿನಲ್ಲಿರುವರೆಲ್ಲಾ ನಿಮ್ಮನ್ನು ಮೆಚ್ಚಿಸಬೇಕಾಗಿದೆ. ಅದಕ್ಕೆ ಅವರು ಭಜನೆ ಮಾಡುತ್ತಾರೆ. ಭಕ್ತಿಯಿಂದ ಅಲ್ಲ" ಎಂದರು. ಆಗ ಬಾಪು ಅವರು 'ನೀನು ಮುಸಲ್ಮಾನರಿಗಿಂತ ಕಡೆಯೇ' ಎಂದೇ ನಗುತ್ತಾ ಕೇಳಿದರಂತೆ.

* * *

ಗುಜರಾತಿನ ಬಾರ್ಡೋಲಿ ಜಿಲ್ಲೆಯ ರೈತರು ಸರಕಾರದ ವಿರುದ್ಧ ಹೋರಾಟ ನಡೆಸಿ ವಿಜಯಿಗಳಾಗಿದ್ದರು. ಇದರ ವಾರ್ಷಿಕೋತ್ಸವ ಉತ್ಸವದಲ್ಲಿ ಜಪಾನ್ ಗಾಂಧೀ ಎಂದೇ ಹೆಸರು ಗಳಿಸಿದ್ದ ಟೋಹೋಯೂ ಕೋಗವಾ ಕೂಡಾ ಜಪಾನ್‌ದಿಂದ ಬಂದಿದ್ದರು. ಆ ಸಮಯದಲ್ಲಿ ಜಪಾನ್ ಚೀನಾದ ಮೇಲೆ ದಾಳಿ ಮಾಡಿತ್ತು. ಚೀನಾ ಸೋಲುವ ಪರಿಸ್ಥಿತಿಯಲ್ಲಿತ್ತು. ಗಾಂಧೀಜಿ ಅವರು "ನೀವು ಚೀನಾದ ಮೇಲಿನ ಧಾಳಿಯನ್ನು ಏಕೆ ವಿರೋಧಿಸಲಿಲ್ಲ?"

ಎಂದು ಜಪಾನ್ ಗಾಂಧಿ ಅವರನ್ನು ಕೇಳಿದರು. ಆಗ ಅವರು "ನಾನು ನಿಮ್ಮಂತೆ ಮಾತನಾಡಿದರೆ ಜಪಾನೀಯರು ನನ್ನನ್ನು 'ಹುಚ್ಚ' ಎಂದೇ ಕರೆದು ದೇಶದಿಂದ ಹೊರಗೆ ದಬ್ಬುತ್ತಾರೆ" ಎಂದು ಹೇಳಿದರು. ಆಗ ಗಾಂಧೀಜಿ ಅವರು ನಗುತ್ತಲೇ ಹೇಳಿದರಂತೆ. "ಸರಿ ಹಾಗದರೆ ಜಪಾನೀ ಗಾಂಧಿ ಎಂದು ಹೇಳಿಕೊಳ್ಳಬೇಡ. ಏಕೆಂದರೆ ನಿನ್ನ ಸ್ಥಾನದಲ್ಲಿ ನಾನೇನಾದರೂ ಇದ್ದಿದ್ದರೆ ಹುಚ್ಚರದೇ ಒಂದು ಸೇನೆ ಕಟ್ಟಿ ಸತ್ಯಾಗ್ರಹ ಮಾಡುತ್ತಿದ್ದೆ".

* * *

ಸಿದ್ದವನಹಳ್ಳಿ ಕೃಷ್ಣಶರ್ಮರ ಹೇಳಿಕೆಯಂತೆ ಗಾಂಧೀಜಿಯ ಸಾಹಿತ್ಯಕ್ಕೆ ಹಾಗೂ ಅವರ ಬರಹಕ್ಕೆ ಶಕ್ತಿ ಎಂದರೆ ಅವರ ಹಾಸ್ಯ. ಅವರ ನಗೆ ಹೂವಿಗೆ ಕಂಪು ಇದ್ದ ಹಾಗೆ. ನಗೆ ಇಲ್ಲದ ಗಾಂಧಿ ಕಂಪಿಲ್ಲದ ಹೂವಿನಂತೆ.

ಯಾರೋ ಒಬ್ಬರು ನಿಮಗೆ ನಗು ಸೇರುತ್ತದೆಯೇ? ಎಂದು ಕೇಳಿದಾಗ ಬೊಚ್ಚು ಬಾಯಿಯ ಮುದುಕರ ಉತ್ತರ ಹೀಗಿತ್ತು. "ನನಗೆ ನಕ್ಕು ನಗಿಸುವುದು ಸೇರದಿದ್ದರೆ ಬಹು ದಿನಗಳ ಹಿಂದೆಯೇ ನಾನು ಊರ ಮುಂದಿನ ಹೊಳೆಯಲ್ಲಿ ಹಾರಿಕೊಳ್ಳುತ್ತಿದ್ದೆ."

* * *

**Laugh and grow fat** ಎಂದು ಆಂಗ್ಲ ಭಾಷೆಯಲ್ಲಿ ಒಂದು ಗಾದೆ ಮಾತು ಇದೆ. ಇದರ ಅರ್ಥ ನಕ್ಕು ದಪ್ಪನಾಗು.

* * *

ಯಾರೋ ಓರ್ವರು ಗಾಂಧೀಜಿಗೆ ಒಂದು ಪತ್ರ ಬರೆದು "ನೀವು ಮದ್ಯಪಾನ ನಿಷೇಧ ಪ್ರಚಾರ ಮಾಡಿದಂತೆ ಜೂಜು, ಸಿನಿಮಾಗಳ ವಿರುದ್ಧ ಏಕೆ ಪ್ರಚಾರ ಮಾಡುವುದಿಲ್ಲ?" ಎಂದೇ ಕೇಳಿದ್ದರು. ಆಗ ಗಾಂಧೀಜಿ ಅವರು "ಜನರು ಮದ್ಯಪಾನದಂತೆ ಇವನ್ನು ಪಾಪ ಎಂದು ಭಾವಿಸಿಲ್ಲ. ನಾನೇನಾದರು ಅವುಗಳನ್ನು ವಿರೋಧಿಸಿದರೆ ನನ್ನ ಮಹಾತ್ಮ ಬಿರುದೇ ಹೋದೀತು" ಎಂದು ನಗೆಯಾಡಿದರು.

* * *

ಗಾಂಧೀಜಿ ಒಮ್ಮೆ ಕಾಶಿಗೆ ಹೋದಾಗ, ಜನ ದಟ್ಟಣೆಯಿಂದ ಇವರಿಗೆ ವಿಶ್ವನಾಥನ ದರ್ಶನವೇ ಆಗಲಿಲ್ಲ. ಆಗ ಗಾಂಧೀಜಿ ನಗುತ್ತಲೇ ಹೇಳಿದ್ದು ಹೀಗೆ "ಮಹಾತ್ಮರ ಕಷ್ಟ ಮಹಾತ್ಮರಿಗೆ ಗೊತ್ತು. ಏಕೆಂದರೆ ನಾನೇ ದರ್ಶನ ಪಾತ್ರನಾದ ಮೇಲೆ ನನಗೆ ವಿಶ್ವನಾಥನ ದರ್ಶನ ಲಾಭ ದೊರೆಯದೇ ಹೋಯಿತು."

* * *

ಗಾಂಧೀಜಿ ಅವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಕೆಲವು ದಿನಗಳಿಗಾಗಿ 1901ರಲ್ಲಿ ಬಂದಾಗ ಕಲ್ಕತ್ತಾದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ ನಡೆದಿತ್ತು. ಅದರ ವರ್ಣನೆ ತುಂಬಾ ಹಾಸ್ಯದಿಂದ ಕೂಡಿದೆ. "ಕಾಂಗ್ರೆಸ್ಸು ವರ್ಷಕ್ಕೆ ಮೂರು ದಿನದ ಹಬ್ಬ! ಹಬ್ಬ ಮುಗಿದ ಕೂಡಲೇ ಅದು ನಿದ್ದೆಹೋಗುತ್ತದೆ."

* * *

ಒಂದು ಬಾರಿ ಅಮೆರಿಕಾದಿಂದ ಓರ್ವ ಮಹಿಳೆ ಗಾಂಧೀಜಿಯವರ ಆಶ್ರಮಕ್ಕೆ ಬಂದಿದ್ದಳು. ಆಗ ಗಾಂಧೀಜಿ ಅವರು ಅವಳಿಗೆ ಹತ್ತು ನಿಮಿಷ ಅವಕಾಶ ನೀಡಿದ್ದರಂತೆ. ಹತ್ತು ನಿಮಿಷ ಕಳೆದರೂ ಆಕೆ ಕದಲದೇ ಹೋದಾಗ, ಗಾಂಧೀಜಿ ನಗುತ್ತಲೇ ಹೀಗೆ ಹೇಳಿದರು. "ಈ ದೇಶದಲ್ಲಿ ಅನೇಕ ಮಹಾತ್ಮರಿದ್ದಾರೆ. ಆದರೆ ನಿಮ್ಮೆದುರಿಗೆ ಇರುವ ಮಹಾತ್ಮ ಹಾಗಲ್ಲ; ಅವನಿಗೆ ಈಗ ನಿದ್ದೆಯ ಸಮಯ" ಎಂದೇ ಹೇಳಿ ಅವಳೆದುರಿಗೇ ಮಲಗಿ ನಿದ್ರೆ ಹೋದರಂತೆ.

* * *

ಒಂದು ಬಾರಿ ಪೊಲೀಸು ಅಧಿಕಾರಿಗಳು ಮಧ್ಯ ರಾತ್ರಿಯಲ್ಲಿ ಬಂದು ದಸ್ತಗಿರಿ ವಾರೆಂಟ್ ತೋರಿಸಿದಾಗ ಗಾಂಧೀಜಿ ನಗುತ್ತಲೇ ಅಧಿಕಾರಿಯನ್ನು ಕೇಳಿದರಂತೆ. "ಹಲ್ಲು ಉಜ್ಜಿಕೊಂಡು ಬರುವೆ. ಅಷ್ಟು ಪುರಸೊತ್ತು ಇದೆಯೇ?" ಈ ಮಾತನ್ನು ಕೇಳಿದ ಅಧಿಕಾರಿ ಕಂಗಾಲನಾಗಿ ಹೋದ.

* * *

1940ರ ಒಂದು ಘಟನೆ. ಗಾಂಧೀಜಿ ಅವರು ತಮ್ಮ ಅಂತರ್ವಾಣಿಯಂತೆ 'ಕಾನೂನುಬದ್ಧ ಮತ್ತು ಶಾಂತಿಯುತ' ಬದಲಿಗೆ 'ಸತ್ಯ ಮತ್ತು ಅಹಿಂಸೆ' ಎಂದು ಬದಲಾಯಿಸುವಂತೆ ಕಾಂಗ್ರೆಸ್ ಸಮಿತಿಗೆ ಒತ್ತಾಯಿಸಿದರು. ಕಾಂಗ್ರೆಸ್ ನಾಯಕರು ಕೋಪಗೊಂಡಾಗ ಗಾಂಧೀಜಿ ಅವರು 'ನನ್ನ ಅಂತರ್ವಾಣಿ'ಯಂತೆ ಹೇಳಿರುವೆ ಎಂದರಂತೆ. ಆಗ ಪಕ್ಕದಲ್ಲಿದ್ದ ಚತುರ್ವೇದಿಯವರು "ಬಾಪು ಕಡಲೇಕಾಯಿ ಅಂತರ್ವಾಣಿಯ ತಾಯಿಯೋ" ಎಂದೇ ಕೇಳಿದರಂತೆ. ಅದಕ್ಕೆ ಶಾಂತಿ ಮೂರ್ತಿಯಾದ ಬಾಪೂ ನಗುತ್ತಲೇ ಹೇಳಿದರಂತೆ "ಏ ಬೆಂಗಳೂರಿನ ಕಡಲೇಕಾಯಿ ಮೇಲೆ ಏಕೆ ನಿನಗೆ ಆಕ್ರೋಶ?"

* * *

ಭಾರತ ದೇಶದ ಕಾರ್ಯದರ್ಶಿಯಾಗಿದ್ದ ಅಮೆರಿಯವರು ಯಾವಾಗಲೂ "ನಾವು ಬ್ರಿಟಿಷರು ಭಾರತಕ್ಕೆ ಎಷ್ಟೊಂದು ಉಪಕಾರ ಮಾಡಿದ್ದೇವೆ. ರೈಲು, ಸ್ಟೀಮರ್, ರೇಡಿಯೋ, ಅಂಚೆ, ದೂರವಾಣಿ ಈ ಎಲ್ಲವೂ ನಮ್ಮ ಕೊಡುಗೆ ಆದರೂ ಭಾರತೀಯರು ಕೇವಲ ಕೃತಘ್ನರು. ನಮ್ಮ ವಿರೋಧವಾಗಿ ಸತ್ಯಾಗ್ರಹ ಮಾಡುತ್ತಿದ್ದಾರೆ" ಎಂದೇ ಜಂಭದ ಮಾತನಾಡುತ್ತಿದ್ದರು. ಅದಕ್ಕೆ ಗಾಂಧೀಜಿ ಅವರು ನಗುತ್ತಲೇ ಹೇಳಿದರು "ನೀವು ಅಮೆರಿಕಾ, ಚೀನಾ, ಜಪಾನ್ ದೇಶಗಳಿಗೆ ಹೋಗಲೇ ಇಲ್ಲವಲ್ಲಾ ಆದರೂ ಅಲ್ಲಿ ಈ ಅನುಕೂಲಗಳಿವೆಯಲ್ಲಾ" ಎಂದರಂತೆ.

* * *

ಸುಭಾಷ್‌ಚಂದ್ರ ಭೋಸ್ ಅವರು ಸಿಂಗಾಪುರದಿಂದ ಒಂದು ಭಾಷಣ ಮಾಡಿ ಸೈನಿಕರಿಗೆ 'ದೆಹಲಿ ಚಲೋ' ಎಂದೇ ಕರೆ ನೀಡಿದರು. ಅದರಂತೆಯೇ "ಗಾಂಧೀಜಿ ಸದ್ಯದಲ್ಲಿಯೇ ನಾವು ದೆಹಲಿಗೆ ಬರುತ್ತಿದ್ದೇವೆ. ಗದ್ದುಗೆ ಏರಲು ಸಿದ್ಧರಾಗಿ. ನಾನು ಗಂಗಾಜಲದಿಂದ ನಿಮ್ಮ ಪಾದ ತೊಳೆಯುವೆ" ಎಂದು ಹೇಳಿದ್ದರು. ಇದನ್ನು ಕೇಳಿದ ಗಾಂಧೀಜಿಯವರಿಗೆ ಕಣ್ಣೀರು ಬಂತು. ಆಗ ಪಕ್ಕದಲ್ಲಿದ್ದ ಸುಧಾಕರ ಚತುರ್ವೇದಿ ಅವರನ್ನು ನಾನೇನಾದರೂ ಮೋಸ ಮಾಡಿದೆನೇ? ಎಂದೇ ಕೇಳಿದರಂತೆ. ಆಗ ಅವರು ನೀವು ಮೂರ್ಖರಂತೆ ವರ್ತಿಸಿದಿರಿ ಎಂದರಂತೆ. ಆಗ ಗಾಂಧಿ ನಗುತ್ತಲೇ ಹೇಳಿದರಂತೆ "ದೇವರಿಗೆ ವಂದನೆಗಳು. ನೀನೇ ಮೂರ್ಖ ಎಂದೇ ಹೇಳಲಿಲ್ಲವಲ್ಲಾ" ಎಂದರಂತೆ!

* * *

ಗಾಂಧೀಜಿ ಅವರು ದುಂಡು ಮೇಜಿನ ಪರಿಷತ್ತಿಗೆಂದೇ ಲಂಡನ್‌ಗೆ ಹೋದಾಗ ಇಂಗ್ಲೆಂಡಿನ ಶ್ರೇಷ್ಠ ನಾಟಕಕಾರನಾದ ಜಾರ್ಜ್ ಬರ್ನಾರ್ಡ್ ಷಾ ಅವರನ್ನು ಭೇಟಿ ಮಾಡಲು ಬಯಸಿದ. ಒಂದು ದಿನ ಅವರ ಸಂದರ್ಶನದ ಏರ್ಪಾಡಾಯಿತು. ಸರಿ ಗಾಂಧೀಜಿ ಅವರು ಇಳಿದುಕೊಂಡ ಸ್ಥಳಕ್ಕೆ ಬರ್ನಾರ್ಡ್ ಷಾ ಬಂದರು. ಅಲ್ಲಿ ಯಾವ ಕುರ್ಚಿ ಮೇಜುಗಳಿಲ್ಲದೇ ಒಂದು ಚಾಪೆಯ ಮೇಲೆ ಕುಳಿತಿರುವ ಗಾಂಧೀಜಿ ಅವರನ್ನು ನೋಡಿ ತಾನೂ ಆ ಚಾಪೆಯ ಮೇಲೆ ಕುಳಿತು, ಬಾಪೂ ನೀವು ಮೇಜರ್ ಗಾಂಧಿ, ನಾನು ಮೈನರ್ ಗಾಂಧಿ" ಎಂದೇ ಹೇಳಿದರು. "ಆದರೆ ನಾವು ಮೈನಾರಿಟಿ" ಎಂದೇ ಹಾಸ್ಯದ ಚಟಾಕಿ ಹಾರಿಸಿದರಂತೆ.

* * *

ಗಾಂಧೀಜಿ ಅವರ ತಿರುವಾಂಕೂರಿನ ಪ್ರವಾಸ ನಾಗರಕೋಯಿಲ್‌ಗೆ ಮುಕ್ತಾಯ. ನಂತರ ಅವರು ತಮಿಳುನಾಡಿಗೆ ತೆರಳುವರಿದ್ದರು. ಆದರೆ ತಮಿಳುನಾಡಿನ ಪ್ರವಾಸದ ಹೊಣೆಗಾರಿಕೆ ಹೊತ್ತಿದ್ದ ಸೌಂದರರಾಜನ್ ಇನ್ನೂ ಬಂದಿರಲಿಲ್ಲ. ಅವರು ಬರುವಲ್ಲಿ ಅಲ್ಪ ವಿಳಂಬವಾಯಿತು. ಅವರು ಬಂದ ಕೂಡಲೇ ಅವರನ್ನು ಥಕ್ಕರ್ ಬಾಪಾ ಒಳಗೆ ಕರೆದುಕೊಂಡು ಹೋದರು. ಆಗ ಗಾಂಧೀಜಿ ಅವರು ಓ ಬಂದೇಬಿಟ್ಟರಾ ಸವಕಲು ನಾಣ್ಯದಂತೆ ಎಂದೆ ಪಟಾಕಿ ಹಾರಿಸಿ ನಕ್ಕು ಅವರನ್ನು ಬರಮಾಡಿಕೊಂಡರಂತೆ.

* * *

ಯರವಾಡ ಜೈಲಿನಲ್ಲಿ ಸರದಾರ ಪಟೇಲರು ಗಾಂಧೀ ಸೇವೆಗೆ ಇದ್ದರು. ಗಾಂಧೀಜಿಗೆಂದೇ ಪಟೇಲರು ಖರ್ಜೂರವನ್ನು ಶುದ್ಧಮಾಡಿ ಇಡುತ್ತಿದ್ದರು. ಎಷ್ಟು ಖರ್ಜೂರ ಶುದ್ಧಿ ಮಾಡಲಿ ಎಂದು ಕೇಳಿದಾಗ ಗಾಂಧೀಜಿ ಅವರು ಹದಿನೈದು ಎಂದೇ ಹೇಳಿದರಂತೆ. ಆಗ ಪಟೇಲರು ಹದಿನೈದಕ್ಕೂ ಇಪ್ಪತ್ತಕ್ಕೂ ಏನು ವ್ಯತ್ಯಾಸ ಎಂದು ಕೇಳಿದಾಗ "ಸರಿ ಹಾಗಾದರೆ ಇಪ್ಪತ್ತೇಕೊಡು" ಎಂದೇ ನಗುತ್ತಾ ಹೇಳಿದರಂತೆ.

* * *

ದುಂಡು ಮೇಜಿನ ಸಮಾವೇಶದಿಂದ ಗಾಂಧೀಜಿ ಬೊಂಬಾಯಿ ತಲುಪಿದ್ದು ದಿನಾಂಕ 28 ಡಿಸೆಂಬರ್. ಗಾಂಧೀಜಿ ಅವರನ್ನು ಭೇಟಿ ಮಾಡಬೇಕೆಂದಿದ್ದ ಜವಾಹರಲಾಲ್ ಹಾಗೂ ಉತ್ತರ ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಶೇರ್‌ವಾನಿಯವರನ್ನು ಭಾರತ ಸರ್ಕಾರ ಬಂಧಿಸಿತು. ಅಲ್ಲದೆ ತುರ್ತು ಪರಿಸ್ಥಿತಿಯ ಅಧಿಕಾರದಡಿಯಲ್ಲಿ ಬಂಗಾಲ, ವಾಯುವ್ಯ ಗಡಿ ಪ್ರಾಂತ್ಯಗಳಲ್ಲಿ ಕಟ್ಟಡ ಹಾಗೂ ಬ್ಯಾಂಕ್ ಖಾತೆಗಳನ್ನು ವಶಪಡಿಸಿಕೊಳ್ಳುವಂತೆ ಸೇನೆಗೆ ಹೇಳಲಾಯಿತು. ಇದನ್ನು ಗಾಂಧೀಜಿ ಅವರ ಗಮನಕ್ಕೆ ತಂದಾಗ ಶಾಂತಮೂರ್ತಿ ಹೇಳಿದ್ದೇನೆಂದರೆ ಲಾರ್ಡ್ ವಿಲ್ಲಿಂಗಡನ್ ನಮ್ಮ ಕ್ರಿಶ್ಚಿಯನ್ ಗವರ್ನರ್ ಜನರಲ್‌ರು ಕ್ರಿಸ್‌ಮಸ್ ಕಾಣಿಕೆಯನ್ನೇ ನನಗೆ ನೀಡಿದ್ದಾರೆ. ಏಕೆಂದರೆ ಕ್ರಿಸ್‌ಮಸ್ ಕಾಣಿಕೆ ನೀಡುವುದು ರೂಡಿಯಲ್ಲವೆ!

* * *

ಗಾಂಧೀಜಿ ಅವರನ್ನು ಯರವಡಾ ಜೈಲಿನಲ್ಲಿ ಬಂಧನಕ್ಕೆ ಗುರಿ ಮಾಡಿದಾಗ ಅಲ್ಲಿ ಜೈಲರ್ ಗಾಂಧೀಜಿಗೆಂತಲೇ ಕುರ್ಚಿ, ಮೇಜು ಹಾಗೂ ಕಪ್ಪುಬಸಿ ಮತ್ತು ಗ್ಲಾಸಿನ ಅನೇಕ ಸಾಮಾನುಗಳನ್ನೂ ತಂದನಂತೆ. ಆಗ ನಗುತ್ತಲೇ ಗಾಂಧೀಜಿ ಯಾರಿಗಾಗಿ ಈ ಎಲ್ಲಾ ಮೇಜುವಾನಿ ಎಂದೇ ಕೇಳಿದರಂತೆ. ಆಗ ಆ ಅಧಿಕಾರಿ ನಿಮಗಾಗಿ ಎಂದೇ ಹೇಳಿದಾಗ ಗಾಂಧೀಜಿ ಹೇಳಿದರಂತೆ "ನಾನು ನನ್ನ ದೇಶದ ಕರಭಾರ ಹೆಚ್ಚಿಸಲು ಇಷ್ಟಪಡಲಾರೆ. ದಯಮಾಡಿ ಇವೆಲ್ಲವನ್ನು ವಾಪಸು ತೆಗೆದುಕೊಂಡು ಹೋಗು" ಎಂದಾಗ ಜೈಲರು ಪೆಚ್ಚುಮೋರೆ ಮಾಡಿಕೊಂಡನಂತೆ.

* * *

ಶಿವಮೊಗ್ಗದಲ್ಲಿ ಗಾಂಧೀಜಿ ಅವರು ಒಂದು ರಾತ್ರಿ ತಂಗಿದ್ದರು. ಮರುದಿನ ಅವರಿಗೆ ಕ್ಷೌರ ಮಾಡಲು ಓರ್ವ ಕ್ಷೌರಿಕನಿಗೆ ಅಲ್ಲಿಯ ಹಿರಿಯ ವಕೀಲರೂ ಗಾಂಧೀಜಿ ಅವರು ತಂಗಿದ್ದ ಮನೆಯ ಒಡೆಯರು ಹೇಳಿದ್ದರು. ಅಲ್ಲದೆ ತಮ್ಮ ಒಂದು ಗರಿಗರಿಯಾದ ಖಾದಿ ಧೋತರ ಹಾಗೂ ಜುಬ್ಬಾ ನೀಡಿ ಬರುವಾಗ ಸ್ನಾನ ಮಾಡಿ ಶುಭ್ರ ಬಟ್ಟೆ ಧರಿಸಿ ಬರುವಂತೆ ಸಲಹೆ ಮಾಡಿದರು. ಕ್ಷೌರಿಕ ಬೆಳಿಗ್ಗೆ ಸ್ನಾನ ಮಾಡಿ ಧೋತರ ಉಟ್ಟುಕೊಂಡು ವಕೀಲರು ನೀಡಿದ ಜುಬ್ಬಾ ಧರಿಸಿಕೊಂಡೇ ಬಂದು, ಭಯ, ಭಕ್ತಿಯಿಂದ

ಗಾಂಧೀಜಿ ಅವರ ಎದುರು ಕುಳಿತು ಕ್ಷೌರ ಮಾಡತೊಡಗಿದ. ಆದರೆ ಜುಬ್ಬದ ತೋಳು ಸಡಿಲಾಗಿ ಕೆಳಗೆ ಜಾರತೊಡಗಿತು. ಆಗ ಅದನ್ನು ಕಂಡು ಗಾಂಧಿ ನಗಲಾರಂಭಿಸಿದರು. ಕೆಳಗಿಳಿದ ಜುಬ್ಬದ ತೋಳನ್ನು ಕ್ಷೌರಿಕ ಮತ್ತೆ ಮೇಲೇರಿಸಿಕೊಂಡಾಗ ಗಾಂಧೀಜಿ ಅವರು ನಗುತ್ತಲೇ "ಈ ಜುಬ್ಬ ನಿನ್ನದಲ್ಲ, ಯಾರದು?" ಎಂದೇ ಕೇಳಿದಾಗ ಕ್ಷೌರಿಕ ವಕೀಲ ಸಾಹೇಬರದು ಎಂದೇ ಹೇಳಿದ. ಆಗ ನಗುತ್ತಲೇ ಗಾಂಧೀಜಿ, "ಪಾಪ ನೀನು ನಿಮ್ಮ ವಕೀಲ ಸಾಹೇಬರಂತೆ ದಪ್ಪವಾಗಲು ತಪಸ್ಸೇ ಮಾಡಬೇಕಾದೀತು. ಏನೇ ಆಗಲಿ ಇನ್ನು ಮುಂದೆ ಖಾದಿ ಬಟ್ಟೆಯನ್ನೇ ತೊಡಬೇಕು" ಎಂದೇ ಹೇಳಿದರು.

* * *

ಹರಿಜನ ಪ್ರವಾಸದಲ್ಲಿ ಗಾಂಧೀಜಿ ಅವರು ತಮಿಳುನಾಡಿನ ಚಿದಂಬರಂಗೆ ಬಂದಾಗ ರಸ್ತೆಯಲ್ಲಿ ಒಂದು ಕಡೆ ಹಲವಾರು ದೊಡ್ಡ ಚಪ್ಪರ ಹಾಕಿ ಗಾಂಧೀಜಿ ಅವರಿಗೆ ನಿಧಿ ಅರ್ಪಿಸಬೇಕೆಂದು ಕಾದಿದ್ದರು. ಆದರೆ ಈ ಕಾರ್ಯಕ್ರಮ ವೇಳಾಪಟ್ಟಿಯಲ್ಲಿ ಇರದೇ ಹೋದುದರಿಂದ ಗಾಂಧೀಜಿ ಅದಕ್ಕೆ ಒಪ್ಪಿಗೆ ನೀಡದೇ ಹೋದಾಗ ಅಲ್ಲಿ ನೆರೆದಿದ್ದ ಜನಸಮೂಹದ ಮುಖಂಡರು ಗಾಂಧೀಜೀ ಅವರ ಕಾರಿಗೆ ಅಡ್ಡಮಲಗಿ ಸತ್ಯಾಗ್ರಹ ನಡೆಸಿದರು. ಆಗ ಗಾಂಧೀಜಿ ಕೋಪ ಮಿಶ್ರಿತ ನಗುವಿನಿಂದಲೇ "ಓಹೋ ಸತ್ಯಾಗ್ರಹಕ್ಕೆ ನಾನೇ ಮೂಲ ಪುರುಷ ಎಂದುಕೊಂಡಿದ್ದೆ. ನೀವು ನನಗೆ ತಿರುಗು ಮಂತ್ರ ಹಾಕುವಿರಾ" ಎಂದೇ ಹೇಳುತ್ತಾ ಕಾರಿನಿಂದ ಇಳಿದು ನಡೆದುಕೊಂಡೇ ಹೋಗಿ ಮುಂದಿನ ಕಾರು ಏರಿ ಚಿದಂಬರಂಗೆ ತಲುಪಿದರು.

* * *

1934ರಲ್ಲಿ ಹರಿಜನ ಪ್ರಚಾರಕಾರ್ಯಕ್ಕೆ ಗಾಂಧೀಜಿ ಮೈಸೂರಿಗೆ ಬಂದಿದ್ದರು. ಮಹಾರಾಜಾ ಕಾಲೇಜಿನ ವಿದ್ಯಾರ್ಥಿಗಳು ಅವರಿಗೆ ನಿಧಿ ಸಮರ್ಪಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ವಿದ್ಯಾರ್ಥಿಗಳು ಬಹು ಉತ್ಸಾಹದಿಂದ ಗಾಂಧೀ ಚಿತ್ರ ಬಿಡಿಸಿದ ಗಾಳಿಪಟಗಳನ್ನು ತಯಾರಿಸಿ ಹಾರಿಬಿಟ್ಟಿದ್ದರು. ಸಭೆಯಲ್ಲಿ ನೆರೆದವರೆಲ್ಲರೂ ಅದನ್ನೇ ಕುತೂಹಲದಿಂದ ನೋಡುತ್ತಿದ್ದಾಗ ಗಾಂಧೀಜಿ ಅವರು ಸಭೆಗೆ ಬಂದರು. ಸಭೆಗೆ ಬಂದ ಕೂಡಲೇ ಕುತೂಹಲದ ಬಗ್ಗೆ ವಿಚಾರಿಸಿದರು. ಆಗ ಕಾರ್ಯಕರ್ತರು

ವಿಷಯ ತಿಳಿಸಿದಾಗ ವಿನೋದದಿಂದಲೇ "Why do you gaze at the picture of Gandhi in the Kite. When real Gandhi is here" ಎಂದರು.

* * *

ಒಮ್ಮೆ ಓರ್ವ ಮಹಿಳೆ ತೋಟಗಾರರು ಕಪಿಗಳಿಗೆ ನೀಡುವ ಹಿಂಸೆಯ ಬಗೆಗೆ ಬರೆದು, "ಕಪಿ ಆಂಜನೇಯನ ಅವತಾರ ಹೀಗಾಗಿ ಅವಕ್ಕೆ ಹಿಂಸೆ ನೀಡಬಾರದೆಂದು ನೀವು ಏಕೆ ಹೇಳಬಾರದು?" ಎಂದಾಗ ಗಾಂಧೀಜಿ ನೀಡಿದ ಉತ್ತರ : "ನಾವು ನಮ್ಮ ಜನರಿಗೆ ಪೈರು ಬೆಳೆಸಿ ಕಪಿಗಳಿಗೆ ತಿನ್ನಿಸಿ ಎಂದು ಹೇಳಲಾರೆ. ಏಕೆಂದರೆ ಕಪಿಗಳೆಲ್ಲ ಆಂಜನೇಯನಲ್ಲ. ಮನುಷ್ಯರೆಲ್ಲಾ ರಾಮನೂ ಅಲ್ಲ."

* * *

ಗಾಂಧೀಜಿ ಅವರು ದಕ್ಷಿಣ ಆಫ್ರಿಕಾದಲ್ಲಿದ್ದಾಗ ಯಾವುದೋ ಕಾರಣಕ್ಕಾಗಿ ಇಂಗ್ಲೆಂಡಿಗೆ ತೆರಳಿದ್ದರು. ಅಲ್ಲಿಂದ ಅವರು ಭಾರತಕ್ಕೆ ಮರಳುವವರಿದ್ದರು. ಆಗ ಭಾರತದ ಕೋಗಿಲೆ ಎಂದೇ ಹೆಸರುವಾಸಿಯಾಗಿದ್ದ ಸರೋಜಿನಿನಾಯ್ಡು ಅವರನ್ನು ಭೇಟಿ ಮಾಡಲೆಂದು ಹೋಗಿದ್ದರು. ಅದು ಊಟದ ಸಮಯ. ಗಾಂಧೀಜಿ ಅವರು ನೆಲದ ಮೇಲೆ ಹಾಸಿದ ಕಂಬಳಿಯ ಮೇಲೆ ಕುಳಿತುಕೊಂಡು ಮರದ ಬಟ್ಟಲಿನಲ್ಲಿದ್ದ ಕಿವುಚಿದ ಟಮೋಟೋ ಹಾಗೂ ಆಲಿವ್ ಎಣ್ಣೆಯಿಂದ ಕೂಡಿದ ಹಣ್ಣನ್ನು ಹಾಗೂ ಕಡಲೆಕಾಯಿ ಬೀಜ ತಿನ್ನುತ್ತಿದ್ದರಂತೆ. ಆಗ ಅವರನ್ನು ಕಂಡ ಸರೋಜಿನಿನಾಯ್ಡು ಗಹಗಹ ನಗುತ್ತಾ "ನೀವು ದಕ್ಷಿಣ ಆಫ್ರಿಕಾದ ವೀರರು ಆದರೆ ನಾನು ಇಲ್ಲಿ ನೋಡುತ್ತಿರುವುದು ಮಿಕ್ಕಿ ಮೌಸ್ ಎಂದೇ ಹೇಳಿದಾಗ. ನಗೆಗಾರ ಗಾಂಧೀಜಿ "ನೀನು ಸರೋಜಿನಿನಾಯ್ಡು ಅಲ್ಲವೇ? ಏಕೆಂದರೆ ಹೀಗೆ ಧಿಮಾಕಿ ಮಾತನ್ನು ಹೇಳುವ ಧೈರ್ಯ ಬೇರೆ ಯಾರಿಗುಂಟು? ಬಾ ಊಟ ಮಾಡು" ಎಂದು ಕರೆದರಂತೆ.

* * *

ಎರಡನೇ ದುಂಡು ಮೇಜಿನ ಸಮ್ಮೇಳನಕ್ಕೆ ಹೋದಾಗ ಅವರು ಲಂಡನ್ನಿನಲ್ಲಿರುವ ಕಿಂಗ್‌ಸೇ ಹಾಲಿನಲ್ಲಿ ತಂಗಿದ್ದರು. ಅವರು ಚಕ್ರವರ್ತಿಯನ್ನು ನೋಡಲು ಹೊರಟಾಗ ರಸ್ತೆಯಲ್ಲಿ ಹಲವು ಪೋರರು ಅರಬೆತ್ತಲೆಯ ಗಾಂಧೀಜಿ ಅವರನ್ನು ಕಂಡು ಹೇ ಗಾಂಧೀ ನಿಮ್ಮ ಪ್ಯಾಂಟ್ ಎಲ್ಲಿ? ಎಂದೇ ನಗೆಯಾಡಿದರಂತೆ. ಆಗ ಗಾಂಧೀಜಿ ನಗುತ್ತಲೆ **you people wear plus fours; mine are minus four** ಎಂದೇ ಚಟಾಕಿ ಹಾರಿಸಿದರಂತೆ.

* * *

ಕಾರ್ಡಿನಲ್ ನ್ಯೂಮಾನ್ ಅವರು ಬರೆದಿದ್ದ "ಕರುಣಾಳು ಬಾ ಬೆಳಕೇ" **(Lead kindly Light)** ಎಂಬ ಪದ್ಯದ ಬಗೆಗೆ ಸಮಾಚಾರ ಪತ್ರಿಕೆಗಳು ಅಸಂಬದ್ಧವಾಗಿ ಬರೆದ ಲೇಖನಗಳನ್ನು ಕಂಡು ಗಾಂಧೀಜಿ ಅವರಿಗೆ ತುಂಬಾ ನೋವಾಯಿತು. ಆದರೆ ನಗೆಗಾರನಾದ ಗಾಂಧೀಜಿ ಅದನ್ನು ವಿನೋದವಾಗಿ "ನನ್ನನ್ನೇನಾದರೂ ಭಾರತದ ವೈಸರಾಯರ ಸ್ಥಾನದಲ್ಲಿ ಒಂದು ದಿನದಮಟ್ಟಿಗೆ ಸರ್ವಾಧಿಕಾರಿಯಾಗಿ ನೇಮಿಸಿದಲ್ಲಿ ನಾನು ಮೊದಲು ಮಾಡಬಹುದಾದ ಕಾರ್ಯ ಎಂದರೆ ಎಲ್ಲಾ ಸಮಾಚಾರ ಪತ್ರಿಕೆಗಳ ಪ್ರಕಟಣೆಯನ್ನು ನಿಲ್ಲಿಸಿಬಿಡುವೆ ಆದರೆ ಹರಿಜನ ಪತ್ರಿಕೆಯೊಂದನ್ನು ಬಿಟ್ಟು" ಎಂದೇ ಚಟಾಕಿ ಹಾರಿಸಿದರಂತೆ.

* * *

ಡಾ॥ ದಿನ್‌ಷಾ ಮೆಹತಾ ಅವರ ಹೇಳಿಕೆಯಂತೆ ಗಾಂಧೀಜಿ ಅವರ ಹಾಸ್ಯ ಒಂದು ಅಂಟು ರೋಗವಂತೆ. ಏಕೆಂದರೆ ಅವರು ನಕ್ಕಾಗ ಅವರ ಬಳಿ ಇರುವರೆಲ್ಲರೂ ಅವರ ಹಾಸ್ಯದಿಂದ ನಗುತ್ತಾರೆ. ಒಂದು ಬಾರಿ ಹಲವು ಅಧಿಕಾರಿಗಳು ಗಾಂಧೀಜಿ ಅವರ ಬಳಿಗೆ ಬಂದಿದ್ದು ಯಾವುದೋ ಒಂದು ಅರ್ಜಿಯನ್ನು ಭರ್ತಿಮಾಡುವಾಗ ಒಂದು ಕಾಲಂನಲ್ಲಿ ವೃತ್ತಿ ಏನು? ಎಂದು ಕೇಳಲಾಗಿತ್ತು. ಆಗ ಎಲ್ಲರೂ ಗಾಂಧೀಜಿ ಅವರನ್ನೇ ನೋಡುತ್ತಾ ಅವರು ತಮ್ಮ ವೃತ್ತಿಯ ಬಗೆಗೆ ಏನು ಹೇಳುತ್ತಾರೆಂದು ಕುತೂಹಲದಿಂದ ಕಾಯುತ್ತಿದ್ದರಂತೆ. ಅಷ್ಟರಲ್ಲಿಯೇ ಹಲವು ಅಧಿಕಾರಿಗಳು, ಸಮಾಜ ಸೇವಕ, ರಾಜಕಾರಣಿ, ಎಂದೇ ಸೂಚಿಸಿದಾಗ ಗಾಂಧೀಜಿ ಅವರು ತಡೆಯಿರಿ, ತಡೆಯಿರಿ ಎಂದೇ ನಗುತ್ತಲೇ "ಒಂದು ಬಾರಿ ನ್ಯಾಯವಾದಿ ಮತ್ತೊಂದು ಬಾರಿ ನ್ಯಾಯವಿರೋಧಿ ಎಂದೇ ಬರೆಯಿರಿ" ಎಂದಾಗ ಎಲ್ಲರೂ ನಗಲಾರಂಭಿಸಿದರಂತೆ.

ಒಂದು ಬಾರಿ ಮಿತವ್ಯಯಕ್ಕೆ ಹೆಸರುವಾಸಿಯಾದ ಜಿಪುಣ ಗಾಂಧೀಜಿ ಮೊಂಡ ಬ್ಲೇಡಿನಿಂದಲೇ ಮುಖಕ್ಷೌರ ಮಾಡಿಕೊಳ್ಳುತ್ತಿದ್ದರು. ಆಗ ಅವರ ಪಕ್ಕದಲ್ಲಿಯೇ ಇದ್ದ ಸುಭಾಷ್‌ಚಂದ್ರ ಬೋಸ್ ಅವರು "ಬಾಪು, ಆ ಬ್ಲೇಡ್ ಸಂಪೂರ್ಣ ಮೊಂಡಾಗಿದೆ. ಅದನ್ನು ಬದಲಾಯಿಸಿ" ಎಂದು ಹೇಳಿದರು. ಆಗ ನಗುತ್ತಲೇ ಗಾಂಧೀಜಿ ಅವರು ಹೋಗು ಹೋಗು; ಈ ಬ್ಲೇಡಿನಿಂದ ನಿಮ್ಮಂಥ ಹತ್ತು ಜನರ ಕತ್ತನ್ನು ಕೊಯ್ಯಬಲ್ಲೆ" ಎಂದರು.

* * *

ಒಮ್ಮೆ ನಾಗರಿಕತೆಯ ಬಗೆಗೆ ಯಾರೋ ಬಂದು ಗಾಂಧೀಜಿಯವರ ಬಳಿ ಪ್ರಸ್ತಾಪಿಸಿದರಂತೆ. ಆಗ ಗಾಂಧೀಜೀ ಅವರು ನಗುತ್ತಲೇ "ನನ್ನ ಸತ್ಯಾಗ್ರಹದ ಪ್ರಭಾವದಿಂದ ಕರಿಯರೇ ಅಧಿಕವಾಗಿರುವ ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರ ನಾಗರಿಕತೆ ಕಪ್ಪಾಗಿ ಧೂಳಿಪಟವಾಯಿತು" ಎಂದೇ ಹೇಳಿದಾಗ ಎಲ್ಲರೂ ನಗಲಾರಂಭಿಸಿದರಂತೆ.

* * *

1920ರಲ್ಲಿ ಗಾಂಧೀಜಿ ಅವರನ್ನು ರಾಜದ್ರೋಹಕ್ಕಾಗಿ ಬಂಧಿಸಿ ಕೋರ್ಟಿಗೆ ಹಾಜರ್‌ಪಡಿಸಲಾಯಿತು. ಆಗ ನ್ಯಾಯಮೂರ್ತಿಯಾದ ಬ್ರೂಮ್ ಫೀಲ್ಡ್ ಅವರು ತುಂಬಾ ಗೌರವದೊಂದಿಗೆ "ತಮ್ಮ ಮೇಲೆ ರಾಜದ್ರೋಹ ಆಪಾದನೆಯನ್ನು ಹೊರಿಸಲಾಗಿದೆ. ಅದನ್ನು ತಾವು ಒಪ್ಪುವಿರೋ?" ಎಂದೇ ಕೇಳಿದರಂತೆ. "ಇದರ ವಿರುದ್ಧ ತಾವೇನಾದರೂ ವಾದ ಮಾಡುವಿರೋ?" ಎಂದು ಕೇಳಿದಾಗ ನಗುತ್ತಲೇ ಗಾಂಧೀಜಿ ಅವರು "ತಾವು ಹೇಳಿದ್ದನ್ನು ನಾವು ಒಪ್ಪುವೆ. ಹಾಗೆಯೇ ಬ್ರಿಟಿಷರ ಆಳ್ವಿಕೆ ಇರುವವರೆಗೂ ನಾನು ಅದನ್ನೇ ಮಾಡುವೆ" ಎಂದೇ ಹೇಳಿದರು. ಆಗ ನ್ಯಾಯಾಧೀಶರು ಈಗಿನ ಕಾನೂನಿನಂತೆ ನಾನು ನಿಮಗೆ 6 ವರ್ಷ ಕಠಿಣ ಶಿಕ್ಷೆ ವಿಧಿಸಿದ್ದೇನೆ ಎಂದೇ ಹೇಳಿದಾಗ "ಸ್ವಾಮಿ, ತಾವು ನನಗೆ ತಿಲಕರಿಗೆ ವಿಧಿಸಿದಂತೆ 6 ವರ್ಷ ಕಠಿಣ ಶಿಕ್ಷೆ ನೀಡಿ ಗೌರವಿಸಿದ್ದೀರಿ" ಎಂದೇ ನಗುತ್ತಾ ಹೇಳಿದರಂತೆ.

* * *

ಗಾಂಧೀಜಿ ಅವರು ಬೆಂಗಳೂರಿನಲ್ಲಿ ತಂಗಿದ್ದಾಗ ವಾಯಿಲಿನ್ ಪಟು ಚೌಡಯ್ಯನವರಿಗೆ ಮೂವತ್ತು ನಿಮಿಷ ಪಿಟೀಲು ಬಾರಿಸಲು ಅವಕಾಶ ನೀಡಿದ್ದರು. ಆಗ ಪಕ್ಕದಲ್ಲಿಯೇ ಕೈಕಟ್ಟಿಕೊಂಡು ನಿಂತಿದ್ದ ಕೈಲಾಸಂ ಅವರನ್ನು ಕರೆದು ಚೌಡಯ್ಯನವರ ಬಗ್ಗೆ, ವಿಚಾರಿಸಿದರಂತೆ. ಆಗ ಕೈಲಾಸಂ "Dear Bapuji, you are a great non violonist. But this Mysore T. Chowdaiah is a great violonist" ಎಂದೇ ಹೇಳಿದಾಗ ಗಾಂಧೀಜಿ ಅವರು ನಗಲಾರಂಭಿಸಿದರಂತೆ. ನಗೆಗಾರರಾದ ಗಾಂಧೀಜಿ ಅವರನ್ನೇ ನಗಿಸಿದ ಭೂಪ ನಮ್ಮ ಕೈಲಾಸಂ.

* * *

ಬೆಂಗಳೂರಿನ ವಾಸದಿಂದ ಮರಳಿ ಹೋಗುವ ದಿನ ರೈಲ್ವೇ ನಿಲ್ದಾಣದಲ್ಲಿ ಜನ ಜಂಗುಳಿ. ಆಗ ಎಚ್. ಆರ್. ವೆಂಕಟರಮಣ ಅಯ್ಯರು ತಾವೇ ನೂತ ನೂಲಿನ ಒಂದು ಲಡಿಯನ್ನು ಗಾಂಧೀಜಿಗೆ ಅರ್ಪಿಸಲು ಮುಂದಾದರು. ಆಗ ಗಾಂಧೀಜಿ ಸಂತೋಷದಿಂದ ತಲೆಬಾಗಿದರು. ಆದರೆ ಹಾರ ಗಾಂಧೀಜಿ ಅವರ ತಲೆಯ ಅಳತೆಗೆ ಕಡಿಮೆಯಾಗಿತ್ತು. ಹೀಗಾಗಿ ಅದು ಮುಖದ ಅರ್ಧ ಭಾಗದಲ್ಲಿ ಸಿಕ್ಕಿಕೊಂಡಿತು. ಆಗ ಗಾಂಧೀಜೀ ಅವರು ಅದನ್ನು ಕತ್ತಿನವರೆಗೂ ಎಳೆದುಕೊಳ್ಳುತ್ತಾ "My young friend don't you knolw my head is growing bigger and bigger everyday" ಎಂದೇ ಹಾಸ್ಯ ಚಟಾಕಿಯನ್ನು ಹಾರಿಸಿದರು.

* * *

1921ರಲ್ಲಿ ನಡೆದ ಘಟನೆ. ಗಾಂಧೀಜಿ ಅವರು ಅಸ್ಸಾಂ ಪ್ರಾಂತದಲ್ಲಿ ಸಂಚಾರ ಮಾಡುತ್ತಿದ್ದರು. ಅಲ್ಲಿನ ರೈಲಿನ ಪ್ರಯಾಣ ಮಾಡಿದವರಿಗೇ ತಿಳಿಯುತ್ತದೆ. ಒಂದು ಬಾರಿ ಗಾಂಧೀಜಿ ಅವರು ಪ್ರಯಾಣ ಮಾಡುತ್ತಿದ್ದ ರೈಲ್ವೆ ಡಬ್ಬಿ ಸುಮಾರು ಮಧ್ಯರಾತ್ರಿ ಸಮಯದಲ್ಲಿ ಕಳಚಿಕೊಂಡಿತು. ಆದರೆ ಅದರ ಅರಿವಾದದ್ದು ಸುಮಾರು ಬೆಳಗಿನ ಜಾವ 3 ಗಂಟೆಗೆ. ಆ ಹೊತ್ತಿಗಾಗಲೇ ಕಳಚಿ ಹೋದ ಡಬ್ಬಿ ಒಂದು ನಿರ್ಜನ ಹಾಗೂ ಘೋರ ಅರಣ್ಯದಲ್ಲಿ ನೆಲೆನಿಂತಿತ್ತು. ದಿಕ್ಕೆಟ್ಟ ಅಧಿಕಾರಿಗಳು ಹಾಗೂ ಗಾಂಧಿಯೊಂದಿಗೆ ಪ್ರವಾಸ ಮಾಡುತ್ತಿದ್ದ ಕೃಷ್ಣದಾಸರು ಬಂದಾಗ ಗಾಂಧೀಜಿ ಅವರು ಗಹಗಹಿಸಿ ನಗುತ್ತಾ "ಹಿಂದಿನಿಂದ ಒಂದು ರೈಲು ನನ್ನ ಡಬ್ಬಿಯನ್ನು ಮುಂದೆ ತಳ್ಳಿಕೊಂಡು ಹೋಗುವುದೆಂದು ನಿರೀಕ್ಷಿಸಿದ್ದೆ. ಆದರೆ ನೀವೇ ಬಂದಿರಾ" ಎಂದೇ ಹೇಳಿದರು.

ಒಂದು ಸಾರ್ವಜನಿಕ ಸಭೆ. ನೂಕು ನುಗ್ಗಲಾಟ ಗಾಂಧೀಜಿ ಅವರಿಗೆ ಮುಂದೆ ಹೋಗಲು ಬಿಡದ ಜನ. ಆಗ ಗಾಂಧೀಜಿ ಅವರೊಂದಿಗಿದ್ದ ಕೃಷ್ಣದಾಸನಿಗೆ "ಕೃಷ್ಣದಾಸ, ನೀನು ನನ್ನ ಬೆನ್ನಿಗೆ ಅಂಟಿಕೊಂಡಿದ್ದರೆ ಕ್ಷೇಮ" ಎಂದೇ ನಗುತ್ತಾ ಹೇಳಿ "**After me Deluge**" ಎಂದೇ ಹೇಳಿದರಂತೆ. ಅಂದರೆ ನನ್ನ ಬಳಿಕ ಪ್ರಳಯವೆಂದೇ ಪಕ್ಕದಲ್ಲಿಯ ಮಿತ್ರರಿಗೆ ಹಾಸ್ಯ ಮಾಡಿದರಂತೆ.

* * *

1924ರಲ್ಲಿ ಪುಣೆಯ ಸಸ್ಸೂನ್ ಆಸ್ಪತ್ರೆಯಲ್ಲಿ ಗಾಂಧೀಜಿ ಅವರಿಗೆ ಶಸ್ತ್ರ ಚಿಕಿತ್ಸೆ ಮಾಡಲಾಯಿತು. ಹೊಟ್ಟೆಯ ಶಸ್ತ್ರಚಿಕಿತ್ಸೆಯಾದುದರಿಂದ ಗಾಂಧೀಜಿ ತುಂಬಾ ನಿತ್ರಾಣವಾಗಿದ್ದು ಅವರಿಗೆ ಏಳಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಹಾಸಿಗೆಯ ಮೇಲೆ ಏಳುವಾಗ ಸುತ್ತಲೂ ನಿಂತಿದ್ದ ದರ್ಶನಾರ್ಥಿಗಳನ್ನು ಕಂಡು ನಗುನಗುತ್ತಲೇ "ಇದು ನನ್ನ ಬೆಳಗಿನ ವ್ಯಾಯಾಮ" ಎಂದೇ ಹೇಳಿ ನೆರೆದವರನ್ನು ನಗುವಂತೆ ಮಾಡುತ್ತಿದ್ದರು.

* * *

ಆರೋಗ್ಯ ಸುಧಾರಣೆಗೆಂದೇ ಮೈಸೂರು ರಾಜ್ಯಕ್ಕೆ ಗಾಂಧೀಜಿ ಅವರು ಬಂದಿದ್ದಾಗ ಕುಮಾರಕೃಪ ಅತಿಥಿ ಗೃಹದಲ್ಲಿ ಹಲವು ದಿನ ತಂಗಿದ್ದರು. ಆ ಸಮಯದಲ್ಲಿ ರಾಷ್ಟ್ರೀಯ ನಾಯಕರೆಲ್ಲರೂ ಬೆಂಗಳೂರಿಗೆ ಬಂದು ಗಾಂಧೀಜಿ ಅವರ ಆರೋಗ್ಯ ವಿಚಾರಿಸಿಕೊಂಡು ಹೋಗುತ್ತಿದ್ದರು. ಎಲ್ಲಾ ನಾಯಕರಂತೆ ಮೋತಿಲಾಲ್ ನೆಹರೂ ಅವರೂ ಬಂದಿದ್ದರು. ಮೋತಿಲಾಲ್‌ರನ್ನು ಸ್ವಾಗತಿಸಲೆಂದೇ ಗಾಂಧೀಜಿ ಅವರು ಕುಮಾರಕೃಪದ ಹೆಬ್ಬಾಗಿಲಲ್ಲಿ ನಿಂತಿದ್ದರು. ಮೋತಿಲಾಲರ ರಾಜಠೀವಿಯನ್ನು ಅರಿತಿದ್ದ ಗಾಂಧೀಜಿ ಅವರು ಬರುತ್ತಿದ್ದಂತೆಯೇ ಅವರಿಗೆ ಹಸ್ತಲಾಘವ ನೀಡಿ ನಗುತ್ತಲೇ ಬರಬೇಕು ನನ್ನ ಅರಮನೆಗೆ ಎಂದಾಗ ನೆರೆದವರೆಲ್ಲರೂ ನಗಲಾರಂಭಿಸಿದರು.

* * *

1920ರಲ್ಲಿ ಗಾಂಧೀಜಿ ಅವರನ್ನು ರಾಜದ್ರೋಹ ಆಪಾದನೆಯ ಮೇಲೆ ಬಂಧಿಸಿದ್ದರು. ಹೀಗೆ ಬಂಧನಕ್ಕೆ ಗುರಿಯಾದ ಅವರನ್ನು ನ್ಯಾಯಾಲಯದಲ್ಲಿ ಹಾಜರುಪಡಿಸಲಾಯಿತು. ನ್ಯಾಯಾಲಯದ ಕೊಠಡಿ ಚಿಕ್ಕದಾಗಿದ್ದು ನ್ಯಾಯಾಲಯದ ಹೊರ ಹಾಗೂ ಒಳಗೆ ಗಾಂಧೀಜಿ ಅವರ ಅಭಿಮಾನಿಗಳಿಂದ ತುಂಬಿಹೋಗಿತ್ತು. ಇದನ್ನು ಕಂಡ ಗಾಂಧೀಜಿ ಅವರು "ಏನು ನನ್ನ ಮದುವೆ ಸಮಾರಂಭವೇ" ಎಂದು ಪೋಲೀಸರನ್ನು ಕೇಳಿದಾಗ ನ್ಯಾಯಾಲಯವು ನಗೆಯಿಂದ ಮುಳುಗಿಹೋಯಿತಂತೆ.

* * *

ಸೇವಾಗ್ರಾಮ ಮಲೇರಿಯಾಕ್ಕೆ ಹೆಸರುವಾಸಿಯಾದ ಹಳ್ಳಿ. ಗಾಂಧೀಜಿ ಅವರ ಆಶ್ರಮ ಈ ಹಳ್ಳಿಯಲ್ಲಿ. ಹೀಗಾಗಿ ರಾಷ್ಟ್ರನಾಯಕರಾದ ಗಾಂಧೀಜಿ ತಮ್ಮ ಸಮಯವನ್ನು ಮಲೇರಿಯಾ ರೋಗಿಗಳ ಸೇವೆಯಲ್ಲಿ ತೊಡಗಿಸಿಕೊಂಡಾಗ ಜವಾಹರಲಾಲ್ ನೆಹರೂ ಅವರಿಗೆ ಇದು ಸರಿದೋರಲಿಲ್ಲ. ಆಗ ಅವರು "ಗಾಂಧೀಜಿ ಇದೇನು ಉದ್ಯೋಗ? ಕೆನ್ಯೂಟ್ ದೊರೆ ಸಮುದ್ರವನ್ನು ತಡೆಗಟ್ಟಲು ಪ್ರಯತ್ನಿಸಿದಂತೆ ನೀವು ರಾಷ್ಟ್ರ ಕಾರ್ಯಗಳನ್ನು ಬದಿಗಿರಿಸಿ ಮಲೇರಿಯಾದ ವಿರುದ್ಧ ಹೋರಾಟ ನಡೆಸಿರುವಿರಲ್ಲಾ" ಎಂದಾಗ ಗಾಂಧೀಜೀ ನಗುತ್ತಲೇ "ಅದಕ್ಕೆ ಈ ವರ್ಷ ನಿಮ್ಮನ್ನು ನಾವು ಕೆನ್ಯೂಟ್ ದೊರೆಯನ್ನಾಗಿ ಮಾಡಿಕೊಂಡಿರುವುದು" ಎಂದೇ ಹಾಸ್ಯ ಮಾಡಿದರಂತೆ. (ಆ ವರ್ಷ ಜವಹರಲಾಲರೂ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು.)

* * *

ಹಿಂದೀ ಪ್ರಚಾರಕ್ಕೆಂದೇ ಗಾಂಧೀಜಿ ಅವರು ಮದ್ರಾಸ್ ನಗರಕ್ಕೆ ಬಂದಾಗ ಜಿ. ಎ. ನಟೇಶನ್ ಅವರ ಮನೆಯಲ್ಲಿ ತಂಗಿದ್ದರು. ಗಾಂಧಿ ನಟೇಶನ್‌ರವರ ಪರಿಚಯ 30 ವರ್ಷದ್ದು. ಅಲ್ಲಿ ನಡೆದ ಸಭೆಯೊಂದರಲ್ಲಿ "ಹಿಂದೀ ಮಾತು ಬಾರದವರೆಲ್ಲಾ ಕೈ ಎತ್ತಿ" ಎಂದು ಗಾಂಧೀಜಿ ಕೇಳಿದಾಗ ಹಲವರು ಕೈ ಎತ್ತಿದರು. ಈ ಗುಂಪಿನಲ್ಲಿ ನಟೇಶನ್ ಅವರು ಕೈ ಎತ್ತಿದ್ದನ್ನು ಕಂಡು ಗಾಂಧೀಜಿ ಅವರು ಜೋರಾಗಿ 'ಶೇಮ್' ಎಂದು, ಹುಡುಗರು ಕೂಗಿದಂತೆ ಕೂಗಿ ನಗಲಾರಂಭಿಸಿದಾಗ ಸೇರಿದವರೆಲ್ಲರೂ ನಗತೊಡಗಿದರಂತೆ.

ಒಮ್ಮೆ ಸತ್ಯಾಗ್ರಹಾಶ್ರಮದಲ್ಲಿದ್ದ ಗಾಂಧೀಜಿ ಅವರನ್ನು ಕಾಣಲು ಗುರುದೇವ ರವೀಂದ್ರನಾಥ ಠಾಕೂರ್ ಅವರು ಬಂದಾಗ ಅವರನ್ನು ಸ್ವಾಗತಿಸಲೆಂದೇ ಗಾಂಧೀಜಿ ಅವರು ರೈಲ್ವೆ ನಿಲ್ದಾಣಕ್ಕೆ ಹೋಗಿದ್ದರು. ಪ್ರಯಾಣದ ದಣಿವಿನಿಂದಾಗಿ ಠಾಕೂರ್‌ರ ಮುಖ ಬಾಡಿತ್ತು. ಅದನ್ನು ಕಂಡು ಗಾಂಧೀಜಿ "ನೀವು ನಮ್ಮೆಲ್ಲರ ನಿಧಿ. ನಿಮ್ಮ ಆರೋಗ್ಯವನ್ನು ಎಚ್ಚರದಿಂದ ಕಾಪಾಡಿಕೊಳ್ಳಬೇಕು" ಎಂದು ಹೇಳಿದರು. ಆಗ ಠಾಕೂರರು "ನೀವಾದರೆ ಭಾಗ್ಯಶಾಲಿಗಳು. ಏಕೆಂದರೆ ಆಗಾಗ್ಗೆ ಸರ್ಕಾರವು ಬಂಧನಕ್ಕೆ ಗುರಿ ಮಾಡಿ ನಿಮಗೆ ವಿಶ್ರಾಂತಿ ಒದಗಿಸುತ್ತದೆ" ಎಂದೇ ನಗುತ್ತಾ ಹೇಳಿದಾಗ ಬಾಪೂಜಿ ಅವರು "ಆ ಭಾಗ್ಯವನ್ನು ದಕ್ಕಿಸಿಕೊಳ್ಳುವ ನಡತೆ ನಿಮ್ಮಲ್ಲಿದ್ದರಲ್ಲವೇ?" ಎಂದಾಗ ಎಲ್ಲರೂ ನಗಲಾರಂಭಿಸಿದರು.

* * *

ಆಂಧ್ರ ಪ್ರಾಂತ್ಯದಲ್ಲಿ ಸಂಚರಿಸುತ್ತಿದ್ದಾಗ ಓರ್ವ ವೈದ್ಯ ಬಾಪೂಜಿ ಅವರನ್ನು ಕಂಡು ಬೇಯಿಸದೇ ಇರುವ ತರಕಾರಿಯನ್ನು ಹೇಗೆ ತಿನ್ನಬೇಕು ಎಂದು ಹೇಳಿದನಂತೆ. ಆತನ ಮಾತನ್ನು ತುಂಬಾ ವಿಶ್ವಾಸದಿಂದ ಕೇಳಿದ ಮಹಾತ್ಮ "ನಾನು ಈ ವಿಧಾನವನ್ನು ಹೇಗೆ ಆರಂಭಿಸಬೇಕೆಂದು ತಾವು ಹೇಳಿದಿರಿ. ಆದರೆ ಜೋಕೆಯಿಂದ ಇರಿ. ಏಕೆಂದರೆ ನಿಮ್ಮ ಪ್ರಾಂತದಲ್ಲಿದ್ದಾಗ ನನ್ನ ಆರೋಗ್ಯದಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ನನ್ನೊಂದಿಗೆ ನಿಮ್ಮನ್ನು ಈ ಜನರು 'ದಫನ್' ಮಾಡಿಬಿಡುವರು" ಎಂದರು.

* * *

ದುಂಡು ಮೇಜಿನ ಸಮಾವೇಶದ ಸಮಯ. ಲಂಡನ್‌ನಲ್ಲಿ ಗಾಂಧೀಜಿ ಅವರು ತಂಗಿದ್ದ ಸ್ಥಳದಲ್ಲಿ ಹಿಂದೂ ಯುವಕನನ್ನು ವಿವಾಹವಾಗಿದ್ದ ತರುಣಿ ಇವರ ಭೇಟಿಗೆ ಬಂದಾಗ "ಗಾಂಧಿ ಅವರೆ, ತಾವು ಅಮೆರಿಕಾಕ್ಕೆ ಯಾವಾಗ ಬರುತ್ತೀರಿ. ನೀವು ಅಂದರೆ ಅಲ್ಲಿ ಪ್ರತಿಯೊಬ್ಬರಿಗೂ ಹುಚ್ಚು" ಎಂದಾಗ ನಗುತ್ತಲೇ "ಚೆನ್ನಾಗಿದೆ ಆ ದೇಶದ ನನ್ನ ಮಿತ್ರರು ನನ್ನನ್ನು ಮೃಗಶಾಲೆಗೆ ದಾಖಲು ಮಾಡುವುದರಲ್ಲಿ ಸಂದೇಹವೇ ಇಲ್ಲ" ಎಂದೇ ಹಾಸ್ಯ ಮಾಡಿದರಂತೆ.

## ಗ್ರಂಥ ಋಣ


1. ಗಾಂಧೀಜಿ ಅವರ ಹಾಸ್ಯ ಪ್ರವೃತ್ತಿ – ಕಂದಾಡೆ ಕೃಷ್ಣಯ್ಯಂಗಾರ್.
2. ಗಾಂಧೀಜಿಯ ಹಾಸ್ಯ ಪ್ರವೃತ್ತಿ ಹಾಗೂ ಹರಿಜನ ಪ್ರಚಾರ ಪ್ರವಾಸ – ಗೊರೂರು ರಾಮಸ್ವಾಮಿ ಅಯ್ಯಂಗಾರ್.
3. ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ – ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಭಾಷಾಂತರ).
4. ಮಹಾತ್ಮ ಗಾಂಧೀ ಡಾ॥ ಎಂ. ಕೆ. ಭಾರತೀ ರಮಣಾಚಾರ್ಯ (ಭಾಷಾಂತರ).
5. ಬೆಂಗಳೂರಿನಲ್ಲಿ ಮಹಾತ್ಮ ಗಾಂಧೀ – ವೇಮಗಲ್ ಸೋಮಶೇಖರ್.
6. ಅಮೋಘ ನಾಯಕ ಗಾಂಧೀ–ನೀಲತ್ತಹಳ್ಳಿ ಕಸ್ತೂರಿ (ಅನುವಾದ).
7. ಕೆಲವು ನೆನಪುಗಳು – ಸುಧಾಕರ ಚತುರ್ವೇದಿ.
8. ಸಿದ್ಧವನಹಳ್ಳಿ ಕೃಷ್ಣಶರ್ಮ ಶತಮಾನೋತ್ಸವದ ಸ್ಮರಣ ಸಂಚಿಕೆಗಳು.
9. The Life of Mahatma Gandhi - Louis Fisher Vol. 1 & 2.
10. Sparkless and Sprinkles (Anecdotes from Gandhijis Life) Dr. T. K. Seshadri.

# ಪರಿಶಿಷ್ಟ

Sources for quoutes ಮೂಲದ ಆಧಾರಗಳು

REFERENCES

| | | |
|---|---|---|
| H | : | Harijan |
| YI | : | Young India |
| B.C | : | Bombay Chonicle |
| I.M | : | India of my Dreams |
| H.S. | : | Hind Swaraj |
| P.N. | : | Politics and Non Violence |
| L.N. | : | Letter to Nehru 1945 |
| Y.M. | : | From Yervada Mandir |
| M.G. | : | Mind of Mahatma Gandhi |

NOS.

| | | |
|---|---|---|
| I | : | Y.I.9.1.1925 |
| II | : | H.2.1.1937 |
| III | : | Y.I.26.3.1931 |
| IV | : | H.28.1946 |
| V | : | Y.I.16.4.1931 |
| VI | : | Y.I.26.3.1931 |
| VII | : | Y.I.28.7.1921 |
| VIII | : | B.C.12.1.1945 |
| IX | : | I.M. 26P |
| X | : | H.27.5.1939 |

| | | |
|---|---|---|
| XI | : | Y.I.17.4.1924 |
| XII | : | H.27.5.1939 |
| XIII | : | H.1.2.1943 |
| XIV | : | Y.I.7.11.1929 |
| XV | : | I.M.P.20 |
| XVI | : | H.S. Ch. 23 |
| XVII | : | H.26.2.1937 |
| XVIII | : | L.N.1945 |
| XIX | : | P.N. P.15 |
| XX | : | H.29.8.1926 |
| XXI | : | Y.I.24.9.1920 |
| XXII | : | H.20.1.1940 |
| XXIII | : | Y.M.1931.Y.I |
| XXV | : | H.29.6.1935 |
| XXVI | : | Y.M.1930 |
| XXVII | : | Y.I. 11.8.1927 |
| XXVIII | : | Y.I. 7.10.1926 |
| XXIX | : | M.H. Ch.V |
| XXX | : | H.11.1.1939 |
| XXXI | : | H.13.1.1940 |
| XXXII | : | M.G. Ch. VI |
| XXXIV | : | Y.I. 2.1.1930 |
| XXXV | : | M.G.V. 26 |
| XXXVII | : | M.G. Ch. V 16 |
| XXXVIII | : | H. 30.12.1934 |

## ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 2-10-1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1881 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಭಾರತ ಸಂದರ್ಶನ | 1896 ಮತ್ತು 1901 |
| ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದು | 1901 |
| ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ | 1903 |
| ಫೀನಿಕ್ಸ್ ಆಶ್ರಮ ಸ್ಥಾಪನೆ | 1904 |
| ಬೋರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ ಇಂಡಿಯನ್ ಆಂಬುಲೆನ್ಸ್ ಕೋರ್ ನೇತೃತ್ವ | 1899 ಮತ್ತು 1906 |
| ಬ್ರಹ್ಮಚರ್ಯ ವ್ರತ ಸ್ವೀಕಾರ | 1906 |
| ಇಂಗ್ಲೆಂಡಿಗೆ ಪ್ರಯಾಣ | 1906 ಮತ್ತು 1909 |
| ದಕ್ಷಿಣ ಆಫ್ರಿಕಾದಲ್ಲಿ ಪ್ರಥಮ ಜೈಲುವಾಸ | 1908 |
| ಟಾಲ್‌ಸ್ಟಾಯ್ ಆಶ್ರಮ ಸ್ಥಾಪನೆ | 1910 |
| ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ | 1913 |
| ಭಾರತಕ್ಕೆ ಆಗಮನ | 1915 |

| | |
|---|---|
| ಸಾಬರಮತಿ ಆಶ್ರಮ ಸ್ಥಾಪನೆ | 1915 |
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | 1919 |
| ಯಂಗ್ ಇಂಡಿಯಾ, ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಆಂದೋಲನ | 1921 |
| ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಖಾದಿ ಪ್ರವಾಸ | 1927 |
| ಉಪ್ಪಿನ ಸತ್ಯಾಗ್ರಹ ಮತ್ತು ದಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು ದುಂಡು ಮೇಜಿನ ಪರಿಷತ್ತು | 1931 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಹರಿಜನ ಯಾತ್ರೆ | 1933 |
| ಹರಿಜನ ಸಾಪ್ತಾಹಿಕ ಪ್ರಾರಂಭ | 1933 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| "ಭಾರತ ಬಿಟ್ಟು ತೊಲಗಿ" ಚಳುವಳಿ | 1942 |
| ಕೊನೆಯ ಬಾರಿಗೆ ಆಗಾಖಾನ್ ಅರಮನೆಯಲ್ಲಿ ಸೆರೆವಾಸ | 1942–44 |
| ಹಂತಕನ ಗುಂಡೇಟಿಗೆ ಬಲಿ | 30–1–1948 |

# ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 8–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 25–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿಯವರ ಮೈಲಿಗಲ್ಲು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 30–00 |
| 24. | ಸ್ವಾತಂತ್ರ್ಯ | 25–00 |
| 25. | ಅಸ್ಪೃಶ್ಯತೆ | 30–00 |
| 26. | ಒಳ್ಳೆಯ ಜೀವನ | 25–00 |
| 27. | ಪ್ರಾರ್ಥನೆ | 25–00 |
| 28. | ಗಾಂಧೀ ಮತ್ತು ಕರ್ನಾಟಕ | 200–00 |
| 29. | ಸತ್ಯ | 30–00 |
| 30. | ವಿದ್ಯಾರ್ಥಿಗಳಿಗಾಗಿ | 30–00 |
| 31. | ಸರ್ವೋದಯ | 30–00 |

| | | |
|---|---|---|
| 32. | ಖಾದಿ ಗ್ರಾಮೋದ್ಯೋಗ | 30–00 |
| 33. | ನನ್ನ ಬಾಲ್ಯದ ನೆನಪುಗಳು | 30–00 |
| 34. | ಗ್ರಾಮರಾಜ್ಯ ಆಡಳಿತ | 5–00 |
| 35. | ನನ್ನ ಕನಸಿನ ಸ್ವರಾಜ್ಯ | 5–00 |
| 36. | ಗಾಂಧೀ ಮತ್ತು ಹಾಸ್ಯ | 20–00 |
| 37. | ನನ್ನ ಆದರ್ಶಗ್ರಾಮ | 5–00 |
| 38. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ಧತಿ | 48–00 |
| 39. | ಸತ್ಯಾಗ್ರಹಿ | 40–00 |
| 40. | ಗ್ರಾಮದಾನ ಗ್ರಾಮ ಸ್ವರಾಜ್ಯ | 25–00 |
| 41. | ಗಾಂಧೀಜಿಯವರ ಪ್ರಾತಃ ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 42. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5–00 |
| 43. | ಸತ್ಯಾಗ್ರಹ | 5–00 |
| 44. | ಹಿಂದ್ ಸ್ವರಾಜ್ | 5–00 |
| 45. | ಆರೋಗ್ಯ | 5–00 |
| 46. | ಮಹಾತ್ಮ ಗಾಂಧಿ ಪ್ರಸ್ತುತತೆ | 10–00 |
| 47. | ಬಹುರೂಪಿ ಗಾಂಧಿ | 10–00 |
| 48. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30–00 |
| 49. | ಕೃತಯುಗಿ ವಿನೋಬಾ ಭಾವೆ | 15–00 |
| 50. | ಮೋಹನ ತರಂಗ | 40–00 |
| 51. | ನಮ್ಮ ಗಾಂಧಿ ತಾತ | 5–00 |
| 52. | ಗೀತಾ ಪ್ರವಚನ | 80–00 |
| 53. | ಜೆ.ಪಿ. ಜೀವನ ಹಾದಿ | 45–00 |
| 54. | ಗಣ್ಯರು ಕಂಡಂತೆ ಗಾಂಧಿ | 20.0 |
| 55. | ಗೀತಾಮಾತೆ | 80.00 |
| 56. | Temple & Mosque | 10–00 |
| 57. | Rastrapita Mahatma Gandhi | 25–00 |
| 58. | Swarajya of Dreams | 5–00 |
| 59. | Gandhi My Grand Father | 5–00 |
| 60. | Grand Pa Gandhi | 5–00 |
| 61. | Relevance of Gandhi | 20–00 |
| 62. | Vinoba Dge of the ±Àage | 20.00 |

## ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

- ಬೆಂಗಳೂರು — ದಿ. 08-05-1915
- ಬೆಳಗಾವಿ — ದಿ. 27-04-1916 ರಿಂದ ದಿ. 01-05-1916 ರವರೆಗೆ
- ಬಿಜಾಪುರ — ದಿ. 05-05-1918 ರಿಂದ ದಿ. 06-05-1918 ರವರೆಗೆ
- ಕಾಸರಗೋಡು — ದಿ. 19-08-1920
- ಮಂಗಳೂರು — ದಿ. 20-08-1920
- ಬೆಂಗಳೂರು — ದಿ. 21-08-1920
- ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ, ಸಂಕೇಶ್ವರ, ಬೆಳಗಾವಿ — ದಿ. 08-11-1920
- ಬೆಳಗಾವಿ ಶಹಾಪುರ, ಖಾನಾಪುರ, ನಂದಗಢ, ಹಳ್ಯಾಳ — ದಿ. 09-11-1920
- ಧಾರವಾಡ — ದಿ. 10-11-1920
- ಹುಬ್ಬಳ್ಳಿ, ಗದಗ — ದಿ. 11-11-1920
- ಸಾಂಗಲಿ — ದಿ. 12-11-1920
- ಬಾಗಲಕೋಟೆ — ದಿ. 27-05-1921
- ಬಿಜಾಪುರ, ಸೊಲ್ಲಾಪುರ — ದಿ. 28-05-1921
- ಬಳ್ಳಾರಿ — ದಿ. 30-05-1921
- ಬೆಳಗಾವಿ — ದಿ. 21-12-1924 ರಿಂದ ದಿ. 30-12-1924 ರವರೆಗೆ
- ಗುಲ್ಬರ್ಗಾ — ದಿ. 22-02-1927
- ನಿಪ್ಪಾಣಿ — ದಿ. 28-03-1927 ರಿಂದ ದಿ. 30-12-1924 ರವರೆಗೆ

| | |
|---|---|
| • ಬೆಳಗಾವಿ | ದಿ. 19–04–1027 ರಿಂದ<br>ದಿ. 20–004–1927ರವರೆಗೆ |
| • ಬೆಂಗಳೂರು | ದಿ. 06–06–1927 ರಿಂದ<br>ದಿ. 13–07–1927 ರವರೆಗೆ |
| • ತುಮಕೂರು | ದಿ. 14–07–1927 |
| • ತುಮಕೂರು, ಮಧುಗಿರಿ | ದಿ. 15–07–1927 |
| • ತುಮಕೂರು | ದಿ. 16–07–1927 |
| • ಬೆಂಗಳೂರು | ದಿ. 17–07–1927 |
| • ಬೆಂಗಳೂರು | ದಿ. 18–07–1927 |
| • ಕೃಷ್ಣರಾಜಸಾಗರ, ಯಡತೊರೆ, ಶ್ರೀರಂಗಪಟ್ಟಣ | ದಿ. 19–07–1927 |
| • ಮೈಸೂರು | ದಿ. 22–07–1927 |
| • ಬೆಂಗಳೂರು | ದಿ. 12–07–1927 ರಿಂದ<br>ದಿ. 30–07–1927 ರವರೆಗೆ |
| • ಕ್ಲೋಸ್‌ಪೇಟೆ (ರಾಮನಗರ) | ದಿ. 31–07–1927 |
| • ಕಾನಕಾನಹಳ್ಳಿ (ಕನಕಪುರ) | |
| • ಬೆಂಗಳೂರು | ದಿ. 01–08–1927 |
| • ಅರಸೀಕರೆ, ಹಾಸನ | ದಿ. 02–08–1927 |
| • ಹಾಸನ | ದಿ. 03–08–1927 |
| • ಹಾಸನ, ಹೊಳೆನರಸೀಪುರ | ದಿ. 04–08–1927 |
| • ಬೆಂಗಳೂರು | ದಿ. 05–08–1927 ರಿಂದ<br>ದಿ. 11–08–1927 ರವರೆಗೆ |
| • ದಾವಣಗೆರೆ | ದಿ. 12–08–1927 |
| • ಹರಿಹರ, ಹೊನ್ನಾಳಿ, ಮಲ್ಲೆಬೆನ್ನೂರು | ದಿ. 13–08–1927 |
| • ಶಿವಮೊಗ್ಗ | ದಿ. 15–08–1927 |

| | |
|---|---|
| ● ಆಯನೂರು, ಕುಂಸಿ, ಸಾಗರ, ಶಿವಮೊಗ್ಗ, ತೀರ್ಥಹಳ್ಳಿ ಮಂದಗದ್ದೆ, ರಾಜನೂರು | ದಿ. 17–08–1927 |
| ● ಶಿವಮೊಗ್ಗ | ದಿ. 15–08–1927 |
| ● ಭದ್ರಾವತಿ, ತರೀಕೆರೆ | ದಿ. 18–08–1927 |
| ● ಬೀರೂರು, ಕಡೂರು | |
| ● ಚಿಕ್ಕಮಗಳೂರು | ದಿ. 19–08–1927 |
| ● ಬೇಲೂರು, ಹಳೇಬೀಡು | ದಿ. 20–08–1927 |
| ● ಅರಸೀಕರೆ | |
| ● ತಿಪಟೂರು | ದಿ. 21–08–1927 |
| ● ಬೆಂಗಳೂರು | ದಿ. 22–08–1927 |
| ● ಬೆಂಗಳೂರು | ದಿ. 23–08–1927 |
| ● ಹೊಸೂರು, ಸೂಳಗಿರಿ, ಕೃಷ್ಣಗಿರಿ | ದಿ. 24–08–1927 |
| ● ಬೆಂಗಳೂರು | ದಿ. 25–08–1927 ರಿಂದ ದಿ. 30–08–1927 ರವರೆಗೆ |
| ● ಹಿಂದೂಪುರ, ವಿಧುರಾಶ್ವಥ, ಗೌರಿಬಿದನೂರು, ದೊಡ್ಡಬಳ್ಳಾಪುರ, ತುಮಕೂರು, ತ್ಯಾಮಗೊಂಡ್ಲು, ನೆಲಮಂಗಲ, ಬೆಂಗಳೂರು, ಮೈಸೂರು | ದಿ. 04–01–1934 |
| ● ತಗಡೂರು, ಬದನವಾಳ, ನಂಜನಗೂಡು, ಮೈಸೂರು | ದಿ. 05–01–1934 |
| ● ಮಂಡ್ಯ, ರಾಮನಗರ, ಕನಕಪುರ, ಬಿಡದಿ, ಕೆಂಗೇರಿ | ದಿ. 06–01–1934 |
| ● ಬೆಂಗಳೂರು | ದಿ. 07–01–1934 ರಿಂದ ದಿ. 09–01–1934 ರವರೆಗೆ |

- ಪೊನ್ನಂಪೇಟೆ, ಹುದಿಕೇರಿ — ದಿ. 22-02-1934
- ವಿರಾಜಪೇಟೆ, ಬೆಳ್ಳೂರು — ದಿ. 23-02-1934
- ಸೋಮವಾರಪೇಟೆ
- ಗುಂಡುಕಟ್ಟೆ
- ಮಡಿಕೇರಿ, ಸಂಪಾಜೆ, ಸುಳ್ಯ — ದಿ. 24-02-1934
- ಪುತ್ತೂರು, ಉಪ್ಪಿನಂಗಡಿ
- ವಿಠಲಗಬ್ಬ, ಕಲ್ಲಡ್ಕ, ಪಾಣೆ
- ಮಂಗಳೂರು, ಬಂಟ್ವಾಳ
- ಮಂಗಳೂರು
- ಮಂಗಳೂರು, ಗುರುಪುರ, ಬಜ್ಪೆ, ಯಳ್ಳೂರು, ಕಟೀಲು, ಕಿನ್ನಗೋಳಿ, ಮೂಲ್ಕಿ, ಪಡುಬಿದ್ರಿ, ಕಾಟಪಾಡಿ, ಗುರುಪುರ, ಉದಯಪುರ, ಉಡುಪಿ, ಬ್ರಹ್ಮಾವರ, ಸಿದ್ದಾಪುರ — ದಿ. 25-02-1934
- ಕುಂದಾಪುರ — ದಿ. 26-02-1934
- ಕುಂದಾಪುರ, ಭಟ್ಕಳ, ಹೊನ್ನಾವರ, ಕಾರವಾರ — ದಿ. 27-02-1934
- ಕಾರವಾರ, ಕುಮುಟಾ, ಅಂಕೋಲ, ಚಂದಿಯಾ, ಶಿರಸಿ — ದಿ. 28-02-1934
- ಸಿರಸಿ, ಸಿದ್ದಾಪುರ, ದಾಸನಕೊಪ್ಪ, ಇಸಲೂರು, ಏಕಾಂಬಿ, ಆಲೂರು, ಬ್ಯಾಡಗಿ, ಮೋಟೆಬೆನ್ನೂರು — ದಿ. 01-03-1934
- ಹಾವೇರಿ, ರಾಣೆಬೆನ್ನೂರು, ಹರಿಹರ, ದಾವಣಗೆರೆ, ಹರಪನಹಳ್ಳಿ, ಕೊಟ್ಟೂರು, ಕೂಡ್ಲಿಗೆ, ದುಗ್ಗಾವತಿ, ಕಣಿವೆಹಳ್ಳಿ, ಸೊಂಡೂರು — ದಿ. 02-03-1934
- ಸೊಂಡೂರು, ಬಳ್ಳಾರಿ, ಹೊಸಪೇಟೆ, ಭಾವಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ — ದಿ. 03-03-1934

| | |
|---|---|
| ● ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ, ಹಿರೇಉಳ್ಳಗೇರಿ, ಬೈಲಹೊಂಗಲ, ಉಪ್ಪಿನ, ಬೆಟಗೇರಿ, ಸೌಂದತ್ತಿ, ಸಂಪಗಾಂವ್, ಹೊಸೂರು, ಬೆಳಗಾವಿ | ದಿ. 04-03-1934 |
| ● ಬೆಳಗಾವಿ | ದಿ. 05-03-1934 |
| ● ಬೆಳಗಾವಿ | ದಿ. 06-03-1934 |
| ● ಬೆಳಗಾವಿ, ಯಮಕನಮರಡಿ, ಹುಕ್ಕೇರಿ, ಗೋಕಾಕ, ಸಂಕೇಶ್ವರ, ನವಲೀಹಾಳ, ಚಿಕ್ಕೋಡಿ, ಅಂಕಲಿ, ಶೆಡಬಾಳ, ಬನಹಟ್ಟಿ, ಅಥಣಿ, ಬಿಜಾಪುರ, ತಿಕೋಟ, ತೊರವಿ, ಇಳಕಲ್ | ದಿ. 07-03-1934 |
| ● ನಂದಿ ಬೆಟ್ಟ | 10-05-1936 ರಿಂದ 30-05-1936 ರವರೆಗೆ |
| ● ಚಿಕ್ಕಬಳ್ಳಾಪುರ, ಚಿಂತಾಮಣಿ, ಕೋಲಾರ, ಬಂಗಾರಪೇಟೆ, ಕೆ.ಜಿ.ಎಫ್. | 31-05-1936 |
| ● ಬೆಂಗಳೂರು | 01-06-1936 ರಿಂದ 12-06-1936 ರವರೆಗೆ |
| ● ಬೆಳಗಾವಿ ಜಿಲ್ಲೆಯ ಹುದಲಿ | 16-04-1936 ರಿಂದ 21-04-1937ರವರೆಗೆ |

## ಏಕಾದಶ ವ್ರತಗಳು

| | |
|---|---|
| ಸತ್ಯ | Truth |
| ಅಹಿಂಸೆ | Ahimsa or Love |
| ಅಸ್ತೇಯ (ಕದಿಯದಿರುವುದು) | Non-Stealing |
| ಬ್ರಹ್ಮಚರ್ಯ | Brahmacharya or Chastity |
| ಅಸಂಗ್ರಹ (ಅಪರಿಗ್ರಹ) | Non-Possession |
| ಶರೀರ ಶ್ರಮ | Physical Labour |
| ಅಸ್ವಾದ (ನಾಲಿಗೆ ಚಪಲ) | Control on the Palate |
| ಸರ್ವತ್ರ ಭಯವರ್ಜನ (ಅಭಯ) | Fearlessness |
| ಸರ್ವಧರ್ಮ ಸಮಾನತ್ವ | Equality of Religion |
| ಸ್ವದೇಶಿ | Swadeshi |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | Removal of Untouchability |

---

## ಏಳು ಸಾಮಾಜಿಕ ಪಾತಕಗಳು Seven Social Sins

| | |
|---|---|
| ತತ್ವರಹಿತ ರಾಜಕಾರಣ | Politics without Principles |
| ದುಡಿಮೆ ಇಲ್ಲದ ಸಂಪತ್ತು | Wealth without Work |
| ಆತ್ಮಸಾಕ್ಷಿ ಇಲ್ಲದ ಸಂತೋಷ | Pleasure without Conscience |
| ಚಾರಿತ್ರ್ಯವಿಲ್ಲದ ಶಿಕ್ಷಣ | Education without Character |
| ನೀತಿ ಇಲ್ಲದ ವ್ಯಾಪಾರ | Commerce without Morality |
| ಮಾನವೀಯತೆ ಇಲ್ಲದ ವಿಜ್ಞಾನ | Science without Humanity |
| ತ್ಯಾಗ ಇಲ್ಲದ ಪೂಜೆ | Worship without Sacrifice |

– ಮಹಾತ್ಮ ಗಾಂಧೀಜಿ

## ಹದಿನೆಂಟು ರಚನಾತ್ಮಕ ಕಾರ್ಯಗಳು
## 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | **Communal Unity** |
| ಅಸ್ಪೃಶ್ಯತಾ ನಿವಾರಣೆ | **Removal of Untouchability** |
| ಪಾನನಿರೋಧ | **Prohibition** |
| ಖಾದಿ | **Khadi** |
| ಇತರೆ ಗ್ರಾಮೋದ್ಯೋಗ | **Other village industries** |
| ಗ್ರಾಮ ನೈರ್ಮಲ್ಯ | **Village Sanitation** |
| ಮೂಲ ಶಿಕ್ಷಣ | **Basic Education** |
| ವಯಸ್ಕರ ಶಿಕ್ಷಣ | **Adult Education** |
| ಮಹಿಳಾ ಸಬಲೀಕರಣ | **Women Empowerment** |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | **Hygiene & Health Education** |
| ಪ್ರಾದೇಶಿಕ ಭಾಷೆ | **Provincial Languages** |
| ರಾಷ್ಟ್ರಭಾಷೆ | **National Language** |
| ಆರ್ಥಿಕ ಸಮಾನತೆ | **Economic Equality** |
| ರೈತರ ಸಬಲೀಕರಣ | **Empowerment of Farmers** |
| ಕಾರ್ಮಿಕರ ಸಬಲೀಕರಣ | **Empowerment of Labours** |
| ಆದಿವಾಸಿ ಸಬಲೀಕರಣ | **Tribal Empowerment** |
| ಕುಷ್ಠರೋಗ ನಿರ್ಮೂಲನೆ | **Cure of Lepracy** |
| ವಿದ್ಯಾರ್ಥಿ | **Students** |

ಮಹಾನ್ ವ್ಯಕ್ತಿಯಾಗಬಯಸುವವನಿಗೆ ಹೇಗೆ ಶುದ್ಧ ಅಂತಃಕರಣವಿರಬೇಕೋ ಅಷ್ಟೇ ಹಾಸ್ಯ ಮನೋಭಾವವೂ, ಸೇವಾಮನೋಭಾವವೂ ಇರಬೇಕಾಗುತ್ತದೆ. ಅಂತಹ ಎಲ್ಲಾ ಗುಣಗಳು ಮಹಾತ್ಮಗಾಂಧೀಜಿ ಅವರಲ್ಲಿ ಕಾಣಬಹುದಾಗಿತ್ತು. ಅವರ ಸಾವಿನ ಅಂತಿಮ ಗಳಿಗೆಯಲ್ಲಿಯೂ ಹಾಸ್ಯ ಮನೋಭಾವನೆಯನ್ನು ಕಾಣಬಹುದಾಗಿತ್ತು.

– ಡಾ॥ ಹೊ. ಶ್ರೀನಿವಾಸಯ್ಯ

ಗಾಂಧೀಜಿ ಅವರಲ್ಲಿದ್ದ ಸಹಜ ಹಾಸ್ಯ ಪ್ರವೃತ್ತಿಯನ್ನು ಸಾಂದರ್ಭಿಕ ಸನ್ನಿವೇಶದೊಂದಿಗೆ ಲೇಖಕರು ನಮ್ಮಲ್ಲೂ ನಗೆ ಉಕ್ಕುವಂತೆ ಬಣ್ಣಿಸಿದ್ದಾರೆ. "ಸಂವೇದನೆ ಇಲ್ಲದಿದ್ದರೆ, ನಾನು ಬಹಳ ಹಿಂದೆಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೆ" ಎಂಬ ಅವರ ಮಾತು ಮಾನವನ ಸಹಜ ಬೆಳವಣಿಗೆಗೆ, ಮನೋವಿಕಾಸಕ್ಕೆ ಮತ್ತು ಸಾರ್ವಜನಿಕ ಸ್ವಾಸ್ಥ್ಯಕ್ಕೆ ಹಾಸ್ಯ ಪ್ರವೃತ್ತಿಯ ಅವಶ್ಯಕತೆಯನ್ನು ಮನದಟ್ಟು ಮಾಡಿಸುತ್ತದೆ.

– ಡಾ. ವೂಡೇ ಪಿ. ಕೃಷ್ಣ

ನವರಸಗಳಲ್ಲಿ ಒಂದಾದ "ಹಾಸ್ಯ" ಅವರಲ್ಲಿ ತೀರಾ ಸಹಜ ಗುಣವಾಗಿತ್ತು. ಅವರ ಹಾಸ್ಯ ಎಂದೂ ಅನ್ಯರನ್ನು ಅವಮಾನಗೊಳಿಸುವ, ದ್ವೇಷಿಸುವ, ನೋವುಂಟು ಮಾಡುವಂಥಹದ್ದಾಗಿರಲಿಲ್ಲ. ಅವರ ಹಾಸ್ಯ, ಕಠಿಣ ಸನ್ನಿವೇಶಗಳನ್ನು ತಿಳಿಗೊಳಿಸುವಂಥಹದ್ದೂ ಮತ್ತು ಸಹಜ ನ್ಯಾಯವನ್ನು ಹಾಸ್ಯಮಯವಾಗಿ ನಿರೂಪಿಸುವಂಥಹದ್ದಾಗಿತ್ತೆಂಬುದು, ಈ ಕೃತಿಯಿಂದ ತಿಳಿಯಬಹುದಾಗಿದೆ.

– ಇಂದಿರಾ ಕೃಷ್ಣಪ್ಪ

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು